




ಸಂಪುಟ : ೧೪

ಸಂಚಿಕೆ : ೩-೪(೬೮-೬೯)

ಅಕ್ಟೋಬರ್ ೨೦೦೫-ಜನವರಿ ೨೦೦೬

ಸಂಪಾದಕ :

ಡಿ.ವಿ. ಪ್ರಹ್ಲಾದ್

ಚಂದಾವಿವರ

ವಾರ್ಷಿಕ ಚಂದಾ : ರೂ. ೧೦೦/-

ಎರಡು ವರ್ಷ : ರೂ. ೨೦೦/-

ಐದು ವರ್ಷ : ರೂ. ೫೦೦/-

ಸಂಪರ್ಕ ವಿಳಾಸ

ನಂ. ೧೦೦, ೨ನೇ ಮುಖ್ಯರಸ್ತೆ,
೬ನೇ ಬ್ಲಾಕ್, ೩ನೇ ಹಂತ,
೩ನೇ ಘಟ್ಟ, ಬನಶಂಕರಿ
ಬೆಂಗಳೂರು - ೫೬೦ ೦೮೫
ಫೋನ್ ನಂ. ೦೮೦-೨೬೭೯೧೯೨೫
ಮೊಬೈಲ್: ೯೮೪೪೪೦ ೬೩೫೧೪

ಮುಖಪುಟ

ತೊಗಲು ಬೊಂಬೆ, ಸರಸ್ವತಿ

ಅಕ್ಷರ-ವಿನ್ಯಾಸ

ಎಂ.ಆರ್. ಗುರುಪ್ರಸಾದ್

ಪುಷ್ಪ ಶರನ ಆವಾಸ
ಈ ವೃಕ್ಷ
ಅದರ ಮೂಲದಲ್ಲಿ ಆಚರಿಸೋಣ
ಮಾಸದ ವಸಂತಗಳನ್ನು
ಕೊನೆ ಇರದ ಮೊದಲ ದಿನವನ್ನು

- ಎಚ್.ಎಸ್. ಶಿವಪ್ರಕಾಶ್

ಈ ಸಂಚಿಕೆಯಲ್ಲಿ...


✦ ಕನ್ನಡ ರಂಗಭೂಮಿಯ ನವೋದಯವನ್ನು ಕಟ್ಟೋಣ
- ಪ್ರಸನ್ನ / ೭

✦ ಕವಿಯ ಬಾಳಿನ ಕೊನೆಯ ದಿನಗಳು
– ಎಂ.ವಿ. ವೆಂಕಟೇಶಮೂರ್ತಿ/ ೧೧

✦ 'ನಿಮ್ಮ ಸೌಧಗಳು, ನಿಮ್ಮ ಮೂರ್ತಿಗಳು'
- ಕಾರಗಡಿ ಶಿವರಾಮು / ೩೭

✦ ಐಟಿ ಉದ್ಯಮ ಮತ್ತು ಕರ್ನಾಟಕ ಸಾಧಕ-ಬಾಧಕಗಳು
- ಬಿ. ಇಂದಿರಾ / ೪೧

✦ ಪ್ರಾಥಮಿಕ ಇಂಗ್ಲಿಷ್ ಶಿಕ್ಷಣ ಮತ್ತು ಉದ್ಯೋಗಾವಕಾಶ
- ಕೆ. ಲಕ್ಷ್ಮಣರಾವ್ / ೪೭

✦ ರಾಯಲಸೀಮೆಯ ಬದುಕನ್ನು ಅರಳಿಸುವ 'ಅರಮನೆ'
- ಎನ್. ಸುರೇಶ್ ನಾಗಲಮಡಿಕೆ / ೭೯

ಕವಿತೆಗಳು ೬೩

✦ ಸುನಂದಾ ಪ್ರಕಾಶ ಕಡಮೆ ✦ ಬಿ.ಎನ್. ರವಿ ಮೂರ್ನಾಡು
✦ ವನಿತ ಪಿ. ✦ ನಾಗಮಂಜುಳಾ ಜೈನ್ ✦ ಅರುಣ್ ಜೋಳದ ಕೂಡ್ಲಿಗಿ
✦ ಅನಂತ ಹುದೆಂಗಜೆ ✦ ಆರ್. ತಾರಿಣಿ ಶುಭದಾಯಿನಿ
✦ ಪ್ರಭಾಮಣಿ ನಾಗರಾಜ ✦ ಚೂಡಾಮಣಿ ರಾಮಚಂದ್ರ
✦ ಪೂರ್ಣಿಮಾ ಎಸ್. ✦ ಬಿ.ಪಿ. ಶೈಲಾ ನಾಗರಾಜ್

ಸಂಕಿರಣ – ೭ ೫೫

ಕುಸುಮಾಕರ ದೇವರಗೆಣ್ಣೂರರ ಕಾದಂಬರಿಗಳು
✦ ಎಂ.ಆರ್. ಭಗವತಿ ✦ ಡಾ. ಕವಿತಾ ರೈ ಬಿ.ಆರ್.
✦ ರೇಣುಕಾ ಮಂಜುನಾಥ್ ✦ ವಿಕ್ರಮ ವಿಸಾಜಿ
✦ ಜಯಂತ ಕಾಯ್ಕಿಣಿ
✦ ಕುಸುಮಾಕರ ದೇವರಗೆಣ್ಣೂರು

ಪುಸ್ತಕ ಪರಿಚಯ ೮೭

# ಹೊಳೆದದ್ದೆ ತಾರೆ ಉಳಿದದ್ದು ಆಕಾಶ

ಪ್ರಿಯ ಓದುಗರೆ,

ಅವತ್ತು ಕವಿ ಶರ್ಮರು ನನ್ನ ಪರಿಚಯಿಸಿದಾಗ ಅವರಿಂದ ತೂರಿ ಬಂದ ಮೊತ್ತಮೊದಲ ಪ್ರಶ್ನೆ ನೀವು ಮಾಧ್ವಾ ಬ್ರಾಮಿನ್ನಾ? ತುಂಬಾ ಮುಜುಗರಕ್ಕೆ ಒಳಗಾದೆ. ನನ್ನ ಇರುಸುಮುರುಸು, ಮೌನ ಗಮನಿಸಿದ ಅವರು ತಟಕ್ಕನೆ ಹತ್ತಿರಕ್ಕೆ ಎಳೆದುಕೊಂಡು, ಹೆಗಲ ಮೇಲೆ ತೋಳು ಹಾಕಿ 'ತಮಾಷೆಗೆ ಕೇಳಿದೆ ರೀ' ಅಂದರು. ಆಗಷ್ಟೇ ಸ್ನಾನ ಮಾಡಿ ಆ ಸಭೆಗೆ ಬಂದಿದ್ದಿರಬೇಕು. ಟಾಲ್ಕಂ ಪೌಡರಿನ ಸುಗಂಧ ನನ್ನ ಮೂಗಿಗೆ ಬಡಿಯುತ್ತಿತ್ತು. ಎಷ್ಟೋ ವರ್ಷಗಳಿಂದ ಅವರ ಬರವಣಿಗೆ ಪತ್ರಿಕೆಗಳನ್ನ ಆರಾಧಿಸುತ್ತಿದ್ದರೂ ಅವರನ್ನು ದೂರದಿಂದ ಕಂಡಿದ್ದರೂ ಹತ್ತಿರ ಹೋಗಿ ಪರಿಚಯ ಮಾಡಿಕೊಳ್ಳಲು ಒಂಥರಾ ಹಿಂಜರಿಕೆ. ಲಂಕೇಶರ ಜೊತೆ ಮುಖಾಮುಖಿಯಾಗಿ ಕಳೆದದ್ದು ಕೆಲವು ಗಂಟೆಗಳಷ್ಟೇ.

ನಂತರದ ಭೇಟಿ ಅವರ ಸಂದರ್ಶನದ್ದು. ಸಂಚಯಕ್ಕೆ ಹತ್ತು ವರ್ಷಗಳಾದ ಸಂದರ್ಭದಲ್ಲಿ ೯೬ರಲ್ಲಿ ಸಂದರ್ಶನಗಳದ್ದೇ ಒಂದು ಪುಸ್ತಕ ಹೊರತರಲು ಯೋಚಿಸಿದಾಗ ನಾವು ಮುಟ್ಟಲಾರದೆ ಉಳಿದಿದ್ದ ಲೇಖಕರಲ್ಲಿ ಲಂಕೇಶ್, ಚಂಪಾ, ಕಂಬಾರ ಮುಂತಾದವರ ಪಟ್ಟಿ ರೂಪುಗೊಂಡಿತು.

ಸರಿ. ಲಂಕೇಶ್ ಸಂದರ್ಶನಕ್ಕೆ ತಯಾರಿ ಮಾಡಿಕೊಂಡು ಹೋಗಿ ಕೂತೆ. ಮೊದಮೊದಲ ಬಿಗುವು ಸಡಿಲಗೊಂಡು ನಮ್ಮ ನೇರ ಮತ್ತು ಗಟ್ಟಿಯಾದ ಪ್ರಶ್ನೆಗಳು ಅವರನ್ನೂ ಉತ್ತೇಜಿಸಿತು. ತಮ್ಮ ಯಾವತ್ತಿನ ಧಾಟಿಯಲ್ಲಿ ಸ್ವಾಮೀಜಿಗಳು ಮನುಷ್ಯರೇ, ಅವರ ಸನ್ಯಾಸಕ್ಕೂ ಅನೇಕ ಬಿಕ್ಕಟ್ಟು ತೊಡಕು, ಗೊಂದಲಗಳಿರ್ತವೆ ಅಂದರು. ತಮ್ಮ ದೇಹ ಅದರ ಖಾಯಿಲೆ ಅದರ ಜೊತೆಗಿನ ಗುದ್ದಾಟಗಳನ್ನು ಹಂಚಿಕೊಳ್ಳುತ್ತಾ ಒಂದು ಹಂತದಲ್ಲಿ ಲಂಕೇಶ್ ನಾನೂ ಒಂದು ಜಿರಲೆ ಥರ ಸತ್ತು ಹೋಗುತ್ತೀನಿ

ಅಂತನ್ನುವ ಮಾತು ಹೇಳುವಾಗ ಅವರ ಕಣ್ಣಲ್ಲಿ ತೆಳುವಾದ ನೀರಿನ ಪರದೆ. ಅಷ್ಟೊತ್ತಿಗೆ ಅವರ ಊಟದ ಸಮಯ ಆಗಿತ್ತು. ಎದ್ದು ಹೋಗಿ ಅಂತ ಮುಲಾಜಿಲ್ಲದೆ ಅಂದರು. ಅವತ್ತು ಡಿಸೆಂಬರ್ ಮೂವತ್ತೊಂದು ಹೊಸ ವರ್ಷದ ಪಾರ್ಟಿಗೆ ಅವರ ತೋಟಕ್ಕೆ ನಮಗೂ ಸಂಸಾರದ ಜೊತೆ ಬನ್ನಿ ಅಂದರು. ಹೊರಗೆ ಕ್ರೇಟು ತುಂಬಾ ಡ್ರಿಂಕುಗಳು ರಾತ್ರೆ ಕಾಯುತ್ತಿತ್ತು.

ಮತ್ತೊಂದು ಸಲದ ಭೇಟಿಯಲ್ಲಿ ನನ್ನ ಮೇಲೆ ಒಂಚೂರು ಮುನಿಸು. ನಿಮಗೆ ಫೋನ್ ಮಾಡಿದ್ದೆ ಯಾಕೆ ಬರಲಿಲ್ಲ. ನನ್ನ ಸಂದರ್ಶನದಲ್ಲಿ ಯಾರು ಯಾರೋ ಗೆಳೆಯರು ಹಿರಿಯರ ಬಗ್ಗೆ ಏನೇನೋ ಹೇಳಿಬಿಟ್ಟಿದ್ದೀನಿ. ಅದೆಲ್ಲ ನೀವು ಹಾಕಿಬಿಟ್ಟರೆ ಅವರ ಮನಸ್ಸಿಗೆ ನೋವಾಗುತ್ತೆ. ಇಲ್ಲ ನಾನು ಅಂಥ ಭಾಗಗಳನ್ನು ಹಾಕೋಲ್ಲ, ಹಾಕಿಲ್ಲ ಅಂದೆ. ಸಣ್ಣ ಪತ್ರಿಕೆಗಳ ಬಗ್ಗೆ ಮಾತು ತಿರುಗಿತು. ನಾನು ತುಂಬಾ ಲೆಖ್ಖಾಚಾರದ ಮನುಷ್ಯ ಒಂದು ಕಿರುಪತ್ರಿಕೆಯನ್ನು ನಡೆಸೋ ಮೂಲಕ ಒಬ್ಬ ಮನುಷ್ಯ ತನ್ನ ಬದುಕನ್ನು ನಿರ್ವಹಿಸುವಷ್ಟಾದರೂ ಹಣ ಗಳಿಸಬೇಕು ಆ ಪತ್ರಿಕೆಯಿಂದ ಅಷ್ಟರಮಟ್ಟಿಗೆ ಆದಾಯ ಹುಟ್ಟಬೇಕು. ಆ ಶೂದ್ರ ಇನ್ನೂ ಆ ಲಡಕಾಸಿ ಟೀವಿಎಸ್‌ನಲ್ಲೇ ಓಡಾಡ್ತಾನೆ. ಒಂದು ಸ್ಕೂಟರ್ ಕೂಡಾ ಕೊಳ್ಳಲು ಆಗಿಲ್ಲ ಅಂದರು. ಸಣ್ಣ ಪತ್ರಿಕೆಗಳನ್ನ ಕುರಿತು ಪುಸ್ತಕ ವಿಮರ್ಶೆಗಳಿರಬೇಕು. ಚುರುಕಾಗಿರಬೇಕು ಅಂದರು. ಆ ವಾರವೇ ಅವರ ಸಂಪಾದಕೀಯದಲ್ಲಿ 'ಸಣ್ಣಪತ್ರಿಕೆಗಳು ಪುಟ್ಟ ವಚನ' ಎಂಬ ಬರಹ ಪ್ರಕಟಗೊಂಡಿತು. ಸಂಚಯದ ಬಗ್ಗೆಯೂ ಅದರಲ್ಲಿತ್ತು. ಅಡ್ಡಗೋಡೆಯ ಮೇಲೆ ದೀಪವಿಟ್ಟ ಹಾಗೆ, ಒಳ್ಳೆಯ ಮಾತಿಗೂ ಇವರಿಗೆ ಬರವಾ ಅಂತ ಹಿರಿಯರೊಬ್ಬರು ಅಂದಿದ್ದರು.

ನಾಲ್ಕು ನೂರು ರೂಪಾಯಿಗಳನ್ನು ಟೇಬಲ್ಲಿನ ಮೇಲೆ ಹಾಕಿ, "ತಗೊಳ್ಳಿ, I can only do this, ನಮ್ಮ ಪತ್ರಿಕೆಯ ಆಕಾಲದ ಆಜೀವ ಚಂದಾ ಹಣ. ಮರೆಯದೇ ರಸೀದಿ ಕಳಿಸಿ. ತಪ್ಪದೇ ಪತ್ರಿಕೆ ಕಳಿಸಿ" ಅಂತ ತಾಕೀತು ಮಾಡಿದರು. ಅವರು ಬದುಕಿರೋ ತನಕ ಅವರಿಗೆ ಪತ್ರಿಕೆ ತಲುಪುತ್ತಿತ್ತು.

ಸರಿಸುಮಾರು ಒಂದೂವರೆ ವರ್ಷ ನನ್ನ ಆಫೀಸು ಅವರ ಪತ್ರಿಕೆ ಕಛೇರಿಯಿದ್ದ ರಸ್ತೆಯಲ್ಲೇ ಮಾಡಿದ್ದೆ. ಆಗೀಗ ಸಂಜೆ ಹೊತ್ತು ಅಥವಾ ಬೆಳಗ್ಗೆ ಬ್ಯೂಗಲ್ ರಾಕ್ ಪಾರ್ಕಿನಲ್ಲಿ ವಾಕಿಂಗ್ ಮಾಡುತ್ತ ಯಾವುದೋ ಮರ, ಅದರಲ್ಲಿನ್ಯಾವುದೋ ಪಕ್ಷಿ ನೋಡುತ್ತಾ ನಿಂತಿರೋರು. ಯಾಕೋ ಮಾತನಾಡಿಸಲು ಹಿಂಜರಿಕೆ. ತಿಕ್ಕಲು ಮನುಷ್ಯ ರೇಗಿಬಿಟ್ಟರೆ ಅಂತ ಮನಸ್ಸಿಗೆ. ಸುಮ್ಮಗೆ ಅವರ ಚಲನವಲನಗಳನ್ನು ಗಮನಿಸುತ್ತಾ ಇರುತ್ತಿದ್ದೆ.

ಅವರ 'ಹುಳಿ ಮಾವಿನ ಮರ' ಬಂದಿತ್ತು. ಅದರ ಬೆನ್ನಲ್ಲೇ ಅವರ ಬಗ್ಗೆ ಬಂದ 'ತಲೆಮಾರಿನ ತಳಮಳ'ಪುಸ್ತಕದ ವಿವಾದ. ಅನಂತಮೂರ್ತಿ ಲಂಕೇಶ್ ಇಬ್ಬರೂ ಸ್ಕೂಲು ಹುಡುಗರಿಗಿಂತಲೂ ಕಡೆಯಾಗಿ ಸಾರ್ವಜನಿಕವಾಗಿ ವರ್ತಿಸಿದ್ದರ ವಿರುದ್ಧ ಸಂಪಾದಕೀಯದಲ್ಲಿ 'ಹುಳಿಮಾವಿನ ಮರ' ಪುಸ್ತಕದ 'ತೋರಿಸಿ

ಕೊಳ್ಳುವಿಕೆ'ಯ ಬಗ್ಗೆ ಪುಸ್ತಕ ವಿಮರ್ಶೆಯಲ್ಲಿ ಖಾರವಾಗಿ ಬರೆದೆ. ಮುಂದಿನ ವಾರದಲ್ಲೇ ನಮ್ಮಗಳ ಹೆಸರು ಹೇಳದೆ ನಾವುಗಳು ಬ್ರಾಮಿನ್ ಪಾಲಿಟ್ ಬ್ಯೂರೋದ ಸದಸ್ಯರು ಅನ್ನುವ ನಾಮಕರಣದೊಂದಿಗೆ ನಮಗೂ ಶಾಸ್ತಿಯಾಗಿತ್ತು. ಇವುಗಳಲ್ಲೆಲ್ಲಾ ಅವರ ದುಷ್ಟಕೂಟದ ಸದಸ್ಯರ ಕೈವಾಡ ಎಷ್ಟಿತ್ತು? ಯಾರು ಹೇಳಬೇಕು.

ಮೊನ್ನೆ ಹಾಲು ತರಲು ಹೋದಾಗ ಅಂಗಡಿಯಲ್ಲಿದ್ದ ಲಂಕೇಶ್ ಪತ್ರಿಕೆಗಳು ಕಣ್ಣಿಗೆ ಬಿತ್ತು. ಕೊಂಡು ತಂದೆ. ಆ ಕಾಲಕ್ಕೆ ಎಷ್ಟೇ ತಾಪತ್ರಯವಿದ್ದರೂ ಮಂಗಳವಾರ ಮಧ್ಯಾಹ್ನ ಐದು ರೂಪಾಯಿ ಹೊಂದಿಸಿಕೊಂಡು ಲಂಕೇಶ್ ಪತ್ರಿಕೆ ಗಬಗಬನೆ ಓದಿ ಗೆಳೆಯರ ಜೊತೆ ಚರ್ಚಿಸಿ ಮನಸ್ಸಿನ ಒಳಗೆ ಇಳಿಸಿಕೊಳ್ಳುತ್ತಿದ್ದ ದಿವಸಗಳು ನೆನಪಾದವು. ಬದಲಾದವರು ನಾವೋ ಪತ್ರಿಕೆಯೋ ಕಾಲವೋ ಗೊತ್ತಾಗುತ್ತಿಲ್ಲ.

ಮೊನ್ನೆ ಮಾರ್ಚ್ ೮, ಲಂಕೇಶ್ ಹುಟ್ಟಿದ ದಿನ ಮಹಿಳೆಯರ ದಿನವೂ ಹೌದು. ಯಾಕೋ ಎಲ್ಲ ನೆನಪಾಯಿತು. ಹೀಗೆ... ಆ ನನ್ನ ದೂರದ ಗುರುವಿಗೆ ಬದುಕಿದ್ದರೆ ಎಪ್ಪತ್ತಾಗುತ್ತಿತ್ತು. ಕನ್ನಡ ಜಗತ್ತು ಇನ್ನಷ್ಟು ಹುರುಪು ಹೊಂದಿರುತ್ತಿತ್ತು.

ಇನ್ನು ಕೆಲವು ಮಾತುಗಳು; ಪ್ರತಿ ಸಂಚಿಕೆಗಳೂ ಸಂಚಯಕ್ಕೆ ಹೊಸ ಹೊಸ ಚಂದಾದಾರರು ಅವರ ನಿರೀಕ್ಷೆಗಳು ಸೇರ್ಪಡೆ ಆಗುತ್ತಲೇ ಇದೆ. ದಯವಿಟ್ಟು ಮನ್ನಿಸಿ ಏಳು ತಿಂಗಳುಗಳ ಕಾಲದಷ್ಟು ಪತ್ರಿಕೆ ತಡವಾಗಿದೆ. ಇನ್ನು ಮುಂದೆ ಹೀಗಾಗದ ಹಾಗೆ ಎಚ್ಚರ ವಹಿಸಲಾಗುತ್ತದೆ. ಈ ಸಂಚಿಕೆಯನ್ನು ಓಡುವ ಕಾಲದ ಜೊತೆಗೆ ಸರಿಗಟ್ಟುವ ಸಲುವಾಗಿ ಸಂಯುಕ್ತ ಸಂಚಿಕೆಯಾಗಿ ರೂಪಿಸಲಾಗಿದೆ.

ವೃತ್ತಿ ಬದುಕಿನ ಕೆಲವು ಸವಾಲುಗಳು ನಮ್ಮ ಹವ್ಯಾಸಗಳ ಜೀವಂತಿಗೂ ಕೈಹಾಕಿ ಜಗ್ಗುವುದು ವಿಪರ್ಯಾಸ. ಆದರೆ ಎರಡನ್ನೂ ನಿರ್ವಹಿಸಬೇಕಾದ್ದು ಒಬ್ಬನೇ ಮನುಷ್ಯನಾದ್ದರಿಂದ ಪರಿಣಾಮ ಬಿದ್ದೇ ಬೀಳುತ್ತದೆ.

೨೦೦೬ರ ಸಾಲಿನ ಸಂಚಿಕೆಗಳು ಏಪ್ರಿಲ್ (ಕೊನೆಯಲ್ಲಿ) ಜುಲೈ, ಅಕ್ಟೋಬರ್ ಮತ್ತು ಮುಂದಿನ ಜನವರಿಯಲ್ಲಿ ಪ್ರಕಟಗೊಳ್ಳುತ್ತವೆ.

ನಿಮ್ಮ

**ಸಂಪಾದಕ**



# ಸಂಚಯ

ಸಾಂಸ್ಕೃತಿಕ ಪತ್ರಿಕೆ

## ಸಂಚಯ ಪುಸ್ತಕ ಮಾಲೆ

ಪ್ರಿಯರೇ,

ಈ ತನಕ 'ಸಂಚಯ' ಪತ್ರಿಕೆಯ ಜೊತೆಜೊತೆಗೆ ಸಾಹಿತ್ಯದ ವಿವಿಧ ಪ್ರಕಾರಗಳ ಇಪ್ಪತ್ತು ಪುಸ್ತಕಗಳನ್ನು ಪ್ರಕಟಿಸಿರುವುದು ನೀವೆಲ್ಲರೂ ಬಲ್ಲಿರಿ. ಇವತ್ತು ಹೊಸ ಬರಹಗಾರರ ಪುಸ್ತಕಗಳು ವಿಪುಲವಾಗಿ ಪ್ರಕಟಗೊಂಡರೂ ಅವುಗಳು ಸೂಕ್ತ ಓದುಗರನ್ನು ತಲುಪುವಲ್ಲಿ ಸೋಲುತ್ತಿವೆ. ಈ ಸಮಸ್ಯೆಯನ್ನು ಗಮನದಲ್ಲಿ ಇಟ್ಟುಕೊಂಡು ಗುಣಮಟ್ಟ ವೈವಿಧ್ಯತೆಗಳಿಗೆ ಆದ್ಯತೆ ನೀಡುತ್ತಲೇ ಹೊಸ ಬರಹಗಾರರನ್ನು ಅವರ ಜೊತೆಗೆ ಮರೆತು ಹೋದ ಹಿರಿಯರನ್ನ ಈ ಪುಸ್ತಕ ಮಾಲೆಯಲ್ಲಿ ಪೋಣಿಸುವುದು ನಮ್ಮ ಗುರಿ. ಲೈಬ್ರರಿ ಲಾಭಗಳ ಗುರಿ ಹೊಂದದೆ ಸಾಹಿತ್ಯದ ಗಂಭೀರ ಓದುಗರಿಗೆ ಒಳ್ಳೆಯ ಪುಸ್ತಕಗಳು, ಒಳ್ಳೆಯ ಪುಸ್ತಕಗಳಿಗೆ ಬೇಕಿರುವ ಓದುಗರು ಇದರ ಅಂತರ ತುಂಬುವುದಕ್ಕೆ ಪ್ರಯತ್ನಿಸಲಾಗುತ್ತದೆ.

೨೦೦೫ರ ಮೊದಲ ಸಾಲಿನ ಪ್ರಕಟಣೆಗಳಾಗಿ ಜಿ.ಬಿ. ಹರೀಶ ಅವರ 'ಬೆಳಕಿನಾಟ' ವಿಮರ್ಶಾ ಲೇಖನಗಳ ಸಂಗ್ರಹ, ಸಂದೀಪನಾಯಕ ಅವರ 'ಅಗಣಿತ ಚಹರೆ' ಕವನ ಸಂಕಲನ, ಡಿ.ವಿ. ಪ್ರಹ್ಲಾದ ಅವರ 'ನಾಳೆಯಿಂದ' ಕವನ ಸಂಕಲನಗಳನ್ನು ಪ್ರಕಟಿಸಲಾಗಿದೆ.

೨೦೦೬ರ ಸಾಲಿನ ಪುಸ್ತಕಗಳಲ್ಲಿ ಈಚೆಗೆ ಅಗಲಿದ ಪ್ರತಿಭಾವಂತ ಕವಯತ್ರಿ ದಿ. ವಿಭಾ ತಿರಕಪಡಿ ಅವರ ಕವನ ಸಂಕಲನ, ಮೇ ತಿಂಗಳಿನಲ್ಲಿ ಬಿಡುಗಡೆಯಾಗಲಿದೆ. ಇದರ ಜೊತೆಗೆ ಯುವ ಕತೆಗಾರ ಚ.ಹ. ರಘುನಾಥರ ಕಥಾ ಸಂಕಲನ, ಬಾಲಸುಬ್ರಹ್ಮಣ್ಯ ಕಂಜರ್ಪಣೆಗೆ ಅವರ ವಿಮರ್ಶೆ ವೈಚಾರಿಕ ಲೇಖನಗಳ ಸಂಕಲನ ಸಿದ್ಧಗೊಳ್ಳುತ್ತಿದೆ.

ಮುಂದಿನ ೨೦೦೭ರಲ್ಲಿ ಹಿರಿಯ ಕವಿಗಳಾದ ಸು.ರಂ. ಎಕ್ಕುಂಡಿ ಅವರ ಸಮಗ್ರ ಕಾವ್ಯ ಪ್ರಕಟಣೆ ನಮ್ಮ ಹೆಗ್ಗುರಿ

ಸಧ್ಯದ ಮೊದಲ ಕಂತಿನ ಪುಸ್ತಕಗಳ ಮುಖಬೆಲೆ ರೂ ೧೨೦ ಅದನ್ನು ಒಂದು ನೂರು ರುಪಾಯಿಗಳಿಗೆ ನೀಡಲಾಗುತ್ತಿದೆ (ಅಂಚೆ / ಕೊರಿಯರ್ ವೆಚ್ಚ ಸೇರಿ) ನಿಮ್ಮ ಸಂಚಯದ ಚಂದಾ ಹಣದ ಜೊತೆಗೆ ಈ ಮಾಲೆಯ ಮತ್ತೊಂದು ನೂರು ರೂಪಾಯಿ ನಿಮ್ಮ ಜೇಬಿಗೆ ಹೆಚ್ಚು ಭಾರವಾಗಲಾರದು. ನಮ್ಮ ಇಂಥಾದ್ದೊಂದು ಸೇತು ನಿರ್ಮಿತಿಗೆ ನಿಮ್ಮದೂ ಒಂದು ಸಹಾಯದ ಸಹಕಾರದ ಹಸ್ತವಿರಲಿ. ಈಗಾಗಲೇ ಪ್ರಕಟಿಸಿರುವ ಸಂಚಯದ ಪುಸ್ತಕಗಳನ್ನು ನಿಮ್ಮ ಸಂಗ್ರಹಕ್ಕೆ ನಿಮ್ಮೂರಿನ ಕಾಲೇಜು ಶಾಲೆಗಳ ಗ್ರಂಥ ಭಂಡಾರಕ್ಕೆ ನಿಮ್ಮ ಹತ್ತಿರದವರ ಗೆಳೆಯರಿಗೆ ಉಡುಗೊರೆಯಾಗಿ ಕೊಡಬಹುದು.

ಪುಸ್ತಕಗಳಿಗೆ ಒಂದು ಕಾರ್ಡುಹಾಕಿ, ಅಥವಾ ಸಂಪಾದಕರ ಮೊಬೈಲ್ ದೂರವಾಣಿಗೆ ಒಂದು ಕರೆ ಮಾಡಿ.

# ಕನ್ನಡ ರಂಗಭೂಮಿಯ ನವೋದಯವನ್ನು ಕಟ್ಟೋಣ

◆ ಪ್ರಸನ್ನ

ರಾಷ್ಟ್ರೀಯ ರಂಗಭೂಮಿ ಎಂಬ ಪರಿಕಲ್ಪನೆಯ ಪುನರಾವಲೋಕನ ಮಾಡಲೆಂದು ನಾವಿಲ್ಲಿ ಸೇರಿದ್ದೇವೆ. ಆದರೆ ನನ್ನ ಲೇಖನದ ತಲೆಬರಹವು ಕನ್ನಡ ರಂಗಭೂಮಿಯ ನವೋದಯವನ್ನು ಕಟ್ಟೋಣ ಎಂದಾಗಿದೆ. ರಾಷ್ಟ್ರೀಯ ರಂಗಭೂಮಿಯ ಪರಿಕಲ್ಪನೆಗೂ ಕನ್ನಡ ರಂಗಭೂಮಿಯ ನವೋದಯಕ್ಕೂ ಏನು ಸಂಬಂಧ ಎಂದು ನೀವು ಕೇಳಬಹುದು. ಸಂಬಂಧವಿದೆ. ಅದನ್ನು ಹೇಳಲಿಕ್ಕೆಂದೇ ನಾನು ಈ ವೇದಿಕೆಯ ಮೇಲೆ ನಿಂತಿದ್ದೇನೆ, ಆದರೆ ಮೊದಲಿಗೆ ಸಧ್ಯ ಚಾಲತಿಯಲ್ಲಿರುವ ರಾಷ್ಟ್ರೀಯ ರಂಗಭೂಮಿಯ ಪರಿಕಲ್ಪನೆಯನ್ನು ವಿಮರ್ಶೆಗೆ ಒಡ್ಡುತ್ತ ನನ್ನ ಮಾತುಗಳನ್ನು ಆರಂಭಿಸುತ್ತೇನೆ.

ರಾಷ್ಟ್ರೀಯ ರಂಗಭೂಮಿ, ರಾಷ್ಟ್ರಭಾಷೆ, ರಾಷ್ಟ್ರನಾಯಕ, ರಾಷ್ಟ್ರೀಕರಣ, ರಾಷ್ಟ್ರಕವಿ... ಎಂದೆಲ್ಲ ನಾವು ಹೇಳುತ್ತಿರುತ್ತೇವೆ. ಏನು ನಮ್ಮ ಮಾತಿನ ಅರ್ಥ? ಕುವೆಂಪು ಅವರು ರಾಷ್ಟ್ರಕವಿ ಎಂದು ನಾವು ಹೆಮ್ಮೆಯಿಂದ ಕರೆಯುವಾಗ, ನಮ್ಮ ಮಾತಿನ ಅರ್ಥವೇನು? ಅಥವಾ ಗಾಂಧೀಜಿ, ನೆಹರು, ಅಂಬೇಡ್ಕರ್ ಅವರನ್ನು ರಾಷ್ಟ್ರನಾಯಕರು ಎನ್ನುವಾಗ ಅವರನ್ನು ಹೇಗೆ ಕಾಣುತ್ತೇವೆ?

ಗಾಂಧೀಜಿಯವರು ತನ್ನ ಮಾತೃಭಾಷೆಯಾದ ಗುಜರಾತಿ ಹಾಗೂ ತಾನು

ಜನಿಸಿದ ಖಾಟಿಯವಾಡದ ಮಣ್ಣಿನ ಸಂಸ್ಕೃತಿಯನ್ನು ತ್ಯಜಿಸಿ ರಾಷ್ಟ್ರೀಯ ನಾಯಕರಾದರೆ? ಅಥವಾ ಅಂಬೇಡ್ಕರ್ ತನ್ನ ಮರಾಠಿ ಭಾಷೆ ಹಾಗೂ ದಲಿತ ಸಂಸ್ಕೃತಿಗಳನ್ನು ಕೈಬಿಟ್ಟು ರಾಷ್ಟ್ರೀಯ ನಾಯಕರಾದರೆ? ಅಥವಾ ಕುವೆಂಪು ಹಾಗೂ ಟಾಗೋರರು ಹಿಂದಿ ಭಾಷೆಯಲ್ಲಿ ಪದ್ಯ ರಚಿಸಿ ರಾಷ್ಟ್ರಕವಿಗಳಾದರೆ? ಇಲ್ಲ, ಭಾರತದ ಸಂವಿಧಾನವು ನಮ್ಮ ಭಾಷೆ ಹಾಗೂ ಸಂಸ್ಕೃತಿಗಳ ಬಗ್ಗೆ ತುಂಬ ಸ್ಪಷ್ಟವಾದ ಹಾಗೂ ವೈಜ್ಞಾನಿಕವಾದ ನಿಲುವನ್ನು ತಾಳಿದೆ. ಭಾರತ ದೇಶದ ಹಲವು ಭಾಷೆಗಳನ್ನು ಅದು ರಾಷ್ಟ್ರೀಯ ಭಾಷೆಗಳು ಎಂದು ಮಾನ್ಯ ಮಾಡಿದೆ. ಹಾಗೆ ಸಂವಿಧಾನವು ಮಾನ್ಯ ಮಾಡಿದ ರಾಷ್ಟ್ರಭಾಷೆಗಳಲ್ಲಿ ಕನ್ನಡವೂ ಒಂದು. ಹಿಂದಿ ಕೂಡ ಒಂದು.

ಅನೇಕ ರಾಜ್ಯಗಳಲ್ಲಿ ಚಾಲತಿಯಲ್ಲಿದೆ ಎಂಬ ಕಾರಣಕ್ಕಾಗಿ ಹಿಂದಿ ಭಾಷೆಯನ್ನು ಆಡಳಿತ ಭಾಷೆ ಎಂದು ಪರಿಗಣಿಸಲಾಗಿತ್ತು. ಆದರೆ ಆ ನಿರ್ಧಾರ ಕೂಡ ಸಮಂಜಸವಾದುದ್ದಲ್ಲ ಎಂಬ ಅರಿವು ನಿಧಾನವಾಗಿಯಾದರೂ ನಮಗೆ ಆಗಿದೆ. ಈಗ ಕೇಂದ್ರದಲ್ಲಿ ಆಡಳಿತ ನಡೆಸುತ್ತಿರುವ ಪ್ರಗತಿಪರ ಒಕ್ಕೂಟವು ಎಲ್ಲ ರಾಷ್ಟ್ರಭಾಷೆಗಳನ್ನೂ ಆಡಳಿತ ಭಾಷೆ ಎಂದು ಪರಿಗಣಿಸುವ ಆಶ್ವಾಸನೆಯನ್ನು ತನ್ನ ಕನಿಷ್ಠ ಸಮಾನ ಕಾರ್ಯಕ್ರಮದಡಿಯಲ್ಲಿ ನೀಡಿದೆ. ಈವರೆಗೆ ಪ್ರಗತಿಪರ ಒಕ್ಕೂಟವು ತನ್ನ ಚುನಾವಣಾ ಆಶ್ವಾಸನೆಯನ್ನು ಈಡೇರಿಸಿಲ್ಲ, ಈಡೇರಿಸಿಯಾರು. ಈಡೇರಿಸದೇ ಹೋದರೆ ಅವರು ಜನರ ಅವಕೃಪೆಗೆ ಪಾತ್ರರಾಗಿ ಅಧಿಕಾರ ಕಳೆದುಕೊಳ್ಳುತ್ತಾರೆ, ಇರಲಿ.

ರಾಷ್ಟ್ರೀಯತೆಯ ನಮ್ಮ ಪರಿಕಲ್ಪನೆಯು ತಲೆಕೆಳಗಾಗಿರುವುದು ರಂಗಭೂಮಿಯ ಕ್ಷೇತ್ರದಲ್ಲಿ ಮಾತ್ರ. ಇದೊಂದು ದುರಂತದ ಸಂಗತಿಯಾಗಿದೆ. ಈ ದುರಂತದಿಂದಾಗಿ ಕನ್ನಡ ರಂಗಭೂಮಿಗೆ ನ್ಯಾಯಯುತವಾಗಿ ಹರಿದು ಬರಬೇಕಿದ್ದ ಕೇಂದ್ರ ಸರಕಾರದ ಅಪಾರವಾದ ಸಂಪನ್ಮೂಲವು ಕರ್ನಾಟಕವನ್ನು ತಲುಪದೆ, ದೆಹಲಿಯ ಸುತ್ತಮುತ್ತಲೇ ದುಂದು ವೆಚ್ಚಕ್ಕೆ ಒಳಗಾಗುತ್ತಿದೆ ಎಂಬುದು ಒಂದು ದುರಂತವಾದರೆ, ಅದಕ್ಕಿಂತ ಗಂಭೀರವಾದ ಸಂಗತಿಯೆಂದರೆ, ಸ್ವಾತಂತ್ರ್ಯಾನಂತರದಲ್ಲಿ ನಾವು ಇಡೀ ದೇಶದ ರಂಗಭೂಮಿಯನ್ನು ದೆಹಲಿ, ಮುಂಬೈ, ಬೆಂಗಳೂರು, ಕಲ್ಕತ್ತೆಯಂತಹ ಬೃಹತ್ ನಗರಗಳ ಕಡೆ ಮುಖ ತಿರುಗಿಸಿ ನಿಲ್ಲಿಸಿದ್ದೇವೆ.

ಸ್ವಾತಂತ್ರ್ಯ ಪೂರ್ವದಲ್ಲಿ ರಾಷ್ಟ್ರೀಯ ಚಳುವಳಿಯ ಮುಂಚೂಣಿಯಲ್ಲಿದ್ದುಕೊಂಡು, ಊರು ಊರುಗಳಲ್ಲಿ, ಹಳ್ಳಿಗಳಲ್ಲಿ, ಶಾಲೆಕಾಲೇಜುಗಳಲ್ಲಿ ಹರಡಿಕೊಂಡು ಜೀವಂತವಿದ್ದ ರಂಗಭೂಮಿಯನ್ನು ಕಡೆಗಣಿಸಿದ್ದೇವೆ. ಇಡೀ ದೇಶಕ್ಕೆ ದೆಹಲಿ ಕೇಂದ್ರಿತವಾದ ಕೇವಲ ಎರಡು ರಂಗಸಂಸ್ಥೆಗಳು, ಮೂವರು ನಾಟಕಕಾರರು, ನಾಲ್ಕಾರು ರಂಗನಿರ್ದೇಶಕರುಗಳನ್ನು ಆಯ್ದು ಅವರೇ ರಾಷ್ಟ್ರಮಾನ್ಯರು ಎಂದು ಸಾರಿದ್ದೇವೆ. ದೇಶದ ವಿವಿಧೆಡೆಗಳಲ್ಲಿ ಕಾರ್ಯನಿರತರಾಗಿರುವ ಹಲವಾರು ರಂಗ ಶಿಕ್ಷಣ ಶಾಲೆಗಳು, ವೃತ್ತಿ ಕಂಪನಿಗಳು, ಜಾನಪದ ಪ್ರಕಾರಗಳು, ಹವ್ಯಾಸಿ ನಾಟಕ ತಂಡಗಳು, ಶಾಲಾಕಾಲೇಜಿನ ನಾಟಕೋತ್ಸವಗಳು, ಕಾರ್ಖಾನೆಗಳ ವಾರ್ಷಿಕೋತ್ಸವಗಳು, ಬೀದಿನಾಟಕಗಳು, ರಾಜ್ಯ ಅಕಾಡೆಮಿಗಳು, ಪ್ರಕಾಶನ ಸಂಸ್ಥೆಗಳು, ರಂಗವಿಮರ್ಶೆ, ನಾಟಕ ರಚನೆ, ರಂಗ ಸಂಗೀತ... ಇತ್ಯಾದಿ ಎಲ್ಲವನ್ನೂ ಮೂಲೆಗುಂಪಾಗಿಸಿದ್ದೇವೆ. ದೆಹಲಿಯಲ್ಲಿ ನಡೆಯುವುದೆಲ್ಲ ರಾಷ್ಟ್ರೀಯ ರಂಗಭೂಮಿ ಎಂತಲೂ, ಮಿಕ್ಕೆಡೆಗಳಲ್ಲಿ ನಡೆಯುವುದು ಪ್ರಾಂತೀಯ ರಂಗಭೂಮಿ ಎಂತಲೂ ಅಸಹ್ಯ ವರ್ಗೀಕರಣ ಮಾಡಿ ಮಾತೃಭಾಷೆಯ ರಂಗಚಟುವಟಿಕೆಗಳನ್ನು ಎರಡನೆಯ ದರ್ಜೆಯ ನಾಗರೀಕರಂತೆ ಪರಿಗಣಿಸತೊಡಗಿದ್ದೇವೆ.

ರಂಗಭೂಮಿಯು ಮೂಲತಃ ವಿಕೇಂದ್ರೀಕೃತವಾದ ಸಂಸ್ಥೆ. ವಿಕೇಂದ್ರೀಕರಣವು ರಂಗಭೂಮಿಯ ಅತ್ಯಂತಿಕವಾದ ಶಕ್ತಿಯಾಗಿರುತ್ತದೆ. ಸಿನಿಮಾ, ಟೆಲಿವಿಷನ್ ಇತ್ಯಾದಿ ಕೈಗಾರಿಕಾ

ಮಾಧ್ಯಮಗಳಿಗೂ ರಂಗಭೂಮಿಗೂ ಇರುವ ಮುಖ್ಯವಾದ ವ್ಯತ್ಯಾಸ ಇದೇ ಆಗಿರುತ್ತದೆ. ನೀರಿನಲ್ಲಿ ಮೀನುಗಳು ಹೇಗೆ ಈಜಿ ಬದುಕುತ್ತವೆಯೋ ಹಾಗೆ, ಜನರ ನಡುವೆ ಈಜಿ ಬದುಕಬಲ್ಲದ್ದು ರಂಗಭೂಮಿ. ದುರಂತದ ಸಂಗತಿಯೆಂದರೆ, ಕಳೆದ ನಾಲ್ಕೈದು ದಶಕಗಳ ತಪ್ಪು ನಿರ್ಧಾರಗಳಿಂದಾಗಿ, ರಂಗಭೂಮಿಗೂ ಜನಗಳಿಗೂ ಇದ್ದ ಕೊಂಡಿ ಕಳಚಿಹೋಗಿದೆ. ಇಂದು ಭಾರತೀಯ ರಂಗಭೂಮಿ ನೀರಿನಿಂದಾಚೆ ಎಸೆದ ಮೀನಿನಂತಾಗಿ ಪ್ರಾಣಾಪಾಯಕ್ಕೆ ಸಿಲುಕಿದೆ.

ಇದೊಂದು ರೀತಿಯ ಸಾಂಸ್ಕೃತಿಕ ದಾಸ್ಯ; ಹಳ್ಳಿಗರು ಬೆಂಗಳೂರಿನತ್ತ, ಬೆಂಗಳೂರಿನವರು ದಿಲ್ಲಿಯತ್ತ, ದಿಲ್ಲಿಯವರು ನ್ಯೂಯಾರ್ಕಿನತ್ತ ಮುಖಮಾಡಿ ನಿಲ್ಲುವುದು. ಜನರತ್ತ ಮುಖ ತಿರುಗಿಸಿ ನಿಲ್ಲಬೇಕಿದ್ದ ರಂಗಭೂಮಿಯ ಜನರಿಂದಾಚೆ ಮುಖ ತಿರುಗಿಸಿ, ಬಾಲಿವುಡ್ ಸಿನಿಮಾ, ಬೆಂಗಳೂರಿನ ಸೀರಿಯಲ್‌ಗಳು ಹಾಗೂ ಹಾಲಿವುಡ್ ಸಿನಿಮಾಗಳತ್ತ ಮುಖ ತಿರುಗಿಸಿ ನಿಂತಿರುವುದು ದಾಸ್ಯವಲ್ಲದೆ ಮತ್ತೇನು?

ಇಂದು ಕನ್ನಡ ರಂಗಭೂಮಿಯ ದಾಸ್ಯವನ್ನು ಕಿತ್ತೊಗೆಯುವ ಕಾಲವು ಸನ್ನಿಹಿತವಾಗಿದೆ. ಕನ್ನಡ ಸಾಹಿತ್ಯದಲ್ಲಿ ನವೋದಯವು ಬಂದದ್ದು ರಾಷ್ಟ್ರೀಯ ಚಳವಳಿಯ ಸಂದರ್ಭದಲ್ಲಿ ತಾನೆ? ಕನ್ನಡ ರಂಗಭೂಮಿಯ ನವೋದಯವೂ ಕೂಡ ಆಧುನಿಕ ದಾಸ್ಯವನ್ನು ಕಿತ್ತಸೆಯುವ ಚಳುವಳಿಯ ಮೂಲಕವೇ ಬರಬೇಕಾಗಿದೆ. ಕನ್ನಡ ರಂಗಭೂಮಿಯ ದಾಸ್ಯ ನಿವಾರಣೆ ಮಾಡುವುದು ಎಂದರೇನು? ಹಿಂದಿಯನ್ನು ಕಿತ್ತಸೆದು ಅದರ ಜಾಗದಲ್ಲಿ ಕನ್ನಡವನ್ನು ಸ್ಥಾಪಿಸುವುದು ಎಂದೆ? ಹಾಗೇನಲ್ಲ. ಕನ್ನಡ ರಂಗಭೂಮಿಯ ಬಿಡುಗಡೆ ಆಗಬೇಕೆಂದರೆ ಕನ್ನಡ, ತೆಲುಗು, ಗುಜರಾತಿ, ಅಸ್ಸಾಮಿ, ಪಂಜಾಬಿ ಇತ್ಯಾದಿ ಎಲ್ಲ ರಂಗಭೂಮಿಗಳ ಬಿಡುಗಡೆಯೂ ಆಗಬೇಕು. ಅಷ್ಟೇ ಏಕೆ ಬಿಹಾರ, ಉತ್ತರಪ್ರದೇಶ, ಜಮ್ಮು, ರಾಜಸ್ಥಾನ, ಮಧ್ಯಪ್ರದೇಶಗಳಲ್ಲಿ ಸೊರಗುತ್ತಿರುವ ಹಿಂದಿ ರಂಗಭೂಮಿಯೂ ಬಿಡುಗಡೆಯಾಗಬೇಕು. ದೆಹಲಿ ಕೇಂದ್ರಿತವಾದ ನಮ್ಮ ಸಾಂಸ್ಕೃತಿಕ ನೀತಿಯಿಂದಾಗಿ ಇತರ ಭಾಷಾ ರಂಗಭೂಮಿಯಷ್ಟೇ ಹಿಂದಿ ರಾಜ್ಯಗಳ ರಂಗಭೂಮಿಯೂ ಸೊರಗಿದೆ ಎಂಬುದು ವಿಪರ್ಯಾಸವಾಗಿದೆ. ಭಾರತೀಯ ರಂಗಭೂಮಿಯು ಮತ್ತೊಮ್ಮೆ ಮಾತೃಭಾಷೆಗಳಿಗೆ ಹಿಂದಿರುಗಲಿ ಎಂದಷ್ಟೆ ನಾವು ಕೇಳುತ್ತಿರುವುದು. ಭಾರತೀಯ ರಂಗಭೂಮಿಯ ಬೇಡಿಕೆಗಳನ್ನು ಪಟ್ಟಿ ಮಾಡುವುದಾದರೆ ಈ ರೀತಿಯಾಗಿ ಹೇಳಬಹುದು.

★ ಕೇಂದ್ರ ಸರಕಾರದ ಸಂಸ್ಕೃತಿ ಇಲಾಖೆಯು ತನ್ನ ಅನುದಾನವನ್ನು ದೆಹಲಿಯಿಂದ ನೇರವಾಗಿ ವಿತರಿಸುವುದನ್ನು ನಿಲ್ಲಿಸಲಿ. ಕೇಂದ್ರದ ಅನುದಾನವು ರಾಜ್ಯವಾರು ಹಂಚಿಕೆಯಾಗಲಿ.

★ ಯಾವುದೇ ಅನುದಾನ ಅಥವಾ ಸಬ್ಸಿಡಿ ಜನರ ಹಣವಾಗುತ್ತದೆ. ಅದು ಜನರಿಗೇ ತಲುಪಬೇಕು. ಅರ್ಥಾತ್ ಪ್ರೇಕ್ಷಕರನ್ನು ತಲುಪಬೇಕು. ಕಲಾವಿದ ಎಷ್ಟೇ ದೊಡ್ಡವನಿರಲಿ, ನೇರವಾಗಿ ವ್ಯಕ್ತಿಗಳಿಗೆ ಹಣನೀಡುವ ಸಂಪ್ರದಾಯ ನಿಲ್ಲಬೇಕು. ಅದು ಭ್ರಷ್ಟತೆಗೆ ಅನುವು ಮಾಡಿಕೊಡುತ್ತದೆ.

★ ಸರಕಾರಗಳು ರಂಗಭೂಮಿಯ ಮೂಲಸೌಲಭ್ಯಗಳ ಅಭಿವೃದ್ಧಿಗೆ ಒತ್ತುಕೊಡಬೇಕು. ಜಿಲ್ಲೆಗಳಲ್ಲಿ ಹಾಗೂ ತಾಲ್ಲೂಕುಗಳಲ್ಲಿ ರಂಗಮಂದಿರ ನಿರ್ಮಾಣ, ರಂಗತಾಲೀಮಿನ ವ್ಯವಸ್ಥೆ, ಶಾಲಾ ಕಾಲೇಜುಗಳಲ್ಲಿ ರಂಗಚಟುವಟಿಕೆ ನಡೆಸಲಿಕ್ಕೆ ಅನುದಾನ, ಕಾರ್ಖಾನೆಗಳಲ್ಲಿ ಹಾಗೂ ಬೃಹತ್

ನಗರಗಳ ಬಡಾವಣೆಗಳಲ್ಲಿ ರಂಗಸೌಕರ್ಯ ಒದಗಿಸುವುದು... ಇತ್ಯಾದಿ ಕೆಲಸಗಳು ಸರಕಾರಗಳು ಹಾಗೂ ಸಾರ್ವಜನಿಕ ಸಂಸ್ಥೆಗಳ ಜವಾಬ್ದಾರಿಯಾಗಿರುತ್ತದೆ.

★ ದೆಹಲಿಯಲ್ಲಿ ಕೇಂದ್ರೀಕೃತವಾಗಿರುವ ರಾಷ್ಟ್ರೀಯ ನಾಟಕಶಾಲೆ ಹಾಗೂ ಕೇಂದ್ರ ಸಂಗೀತ ನಾಟಕ ಅಕಾದೆಮಿಗಳು ವಿಕೇಂದ್ರೀಕರಣ ಹೊಂದಲಿ.

★ ಪ್ರತಿ ರಾಜ್ಯದಲ್ಲಿಯೂ ಒಂದು ರಾಷ್ಟ್ರೀಯ ನಾಟಕಶಾಲೆ ಹಾಗೂ ರಾಷ್ಟ್ರೀಯ ವೃತ್ತಿಪರ ನಾಟಕ ತಂಡ (ರೆಪರ್ಟರಿ) ಸ್ಥಾಪಿತವಾಗಲಿ.

★ 'ಶಿಕ್ಷಣ ರಂಗಭೂಮಿ' ಕಾರ್ಯಕ್ರಮವನ್ನು ಕೇಂದ್ರ ಸರ್ಕಾರದ ಶಿಕ್ಷಣ ಮಂತ್ರಾಲಯವು 'ರಾಷ್ಟ್ರೀಯ ಕಾರ್ಯಕ್ರಮ' ಎಂದು ಸ್ವೀಕರಿಸಲಿ. ನಲಿ-ಕಲಿ ಇತ್ಯಾದಿ ಯೋಜನೆಗಳಡಿಯಲ್ಲಿ, ತರಬೇತಾದ ರಂಗಕರ್ಮಿಗಳನ್ನು ಶಾಲಾ ಶಿಕ್ಷಕರನ್ನಾಗಿ ನಿಯೋಜಿಸಿಕೊಳ್ಳಲಿ. ಹಾಗೆ ಮಾಡುವುದರಿಂದ ಇತ್ತ ಶಿಕ್ಷಣವೂ ಸಂತಸದಾಯಕವಾಗುತ್ತದೆ, ಅತ್ತ ರಂಗಭೂಮಿಯು ಗ್ರಾಮೀಣ ಭಾರತವನ್ನು ಪುನರ್ ಪ್ರವೇಶಿಸಲಿಕ್ಕೆ ಸಾಧ್ಯವಾಗುತ್ತದೆ.

★ ಟೆಲಿವಿಷನ್ ಮತ್ತು ಸಿನಿಮಾಗಳು ಸಾಂಸ್ಕೃತಿಕ ಕೈಗಾರಿಕೆಗಳು. ಮಿಕ್ಕೆಲ್ಲ ಕೈಗಾರಿಕೆಗಳು ಭೌತಿಕ ಪ್ರದೂಷಣವನ್ನು ಹೊರಹಾಕಿದರೆ, ಸಮೂಹ ಮಾಧ್ಯಮಗಳು ಸಾಂಸ್ಕೃತಿಕ ಪ್ರದೂಷಣವನ್ನು ಹೊರಹಾಕುತ್ತವೆ. ಅಷ್ಟೇ ಅಲ್ಲದೆ, ಈ ಕೈಗಾರಿಕೆಗಳು ಅವ್ಯಾಹತವಾಗಿ ರಂಗನಾಟಕಗಳನ್ನು ಹಾಗೂ ರಂಗನಟರು, ನಿರ್ದೇಶಕರು, ನಾಟಕಕಾರರು, ತಂತ್ರಜ್ಞರುಗಳನ್ನು ಸೆಳೆದುಕೊಂಡು ಹೋಗುತ್ತಿವೆ. ರಂಗಭೂಮಿಯು ಸಾಂಸ್ಕೃತಿಕ ಮಹತ್ವದ ಮೂಲ ಸಾಮಗ್ರಿಯಾಗಿದೆ. ಇದರ ದುರುಪಯೋಗವಾಗದಂತೆ ತಡೆಗಟ್ಟಬೇಕು. ಸಾಂಸ್ಕೃತಿಕ ಮೂಲ ಸಾಮಗ್ರಿಯ ಪುನರ್ ನಿರ್ಮಾಣದ ವೆಚ್ಚವನ್ನು ಈ ಕೈಗಾರಿಕೆಗಳು ಭರಿಸುವಂತೆ ಕ್ರಮಕೈಗೊಳ್ಳಬೇಕು.

ಇವು ಬೇಡಿಕೆಗಳಾದವು. ಇವುಗಳ ಈಡೇರಿಕೆಗಾಗಿ ಹೋರಾಟ ಮಾಡೋಣವಂತೆ. ಆದರೆ ಕನ್ನಡ ರಂಗಭೂಮಿಯ ನವೋದಯ ಕಟ್ಟಲಿಕ್ಕೆ ಇಷ್ಟರಿಂದಲೇ ಸಾಧ್ಯವಿಲ್ಲ. ನಾವುಗಳು ನಮ್ಮ ಒಳಗೆ ನೋಡಿಕೊಳ್ಳಬೇಕಾಗಿದೆ. ಸಮಾಜದ ಆಶಯಗಳಿಗೆ ಸ್ಪಂದಿಸಬೇಕಿದೆ. ರಂಗಭೂಮಿ ಕಲಾತ್ಮಕ ಮಾಧ್ಯಮ ನಿಜ. ಆದರೆ ಕಲಾತ್ಮಕತೆಯೇ ನಮ್ಮ ಕೇವಲಾಗಬಾರದು. ನಮ್ಮ ಶಾಲೆ-ಕಾಲೇಜುಗಳತ್ತ, ವಿವಿಧ ಸಮುದಾಯಗಳತ್ತ ಹಾಗೂ ಕರ್ನಾಟಕದ ಹಳ್ಳಿಗಾಡಿನತ್ತ ಕಣ್ಣು ಹಾಯಿಸಬೇಕು. ಆಗ ಮಾತ್ರ ಕನ್ನಡ ರಂಗಭೂಮಿಯ ನವೋದಯವನ್ನು ಕಟ್ಟುವುದು ಸಾಧ್ಯ.

ದೆಹಲಿಯ ರಾಷ್ಟ್ರೀಯ ನಾಟಕ ಶಾಲೆ ಬೆಂಗಳೂರಿನಲ್ಲಿ ನಡೆಸಿದ ಥಿಯೇಟರ್ ಉತ್ಸವ ಸಂದರ್ಭದಲ್ಲಿ 'ರಾಷ್ಟ್ರೀಯ ರಂಗಭೂಮಿಯ ಪರಿಕಲ್ಪನೆ ಮತ್ತು ಪ್ರಸ್ತುತತೆ'ಯನ್ನು ಕುರಿತ ವಿಚಾರಸಂಕಿರಣದಲ್ಲಿ (೧೪-೦೧-೨೦೦೬) ಮಾಡಿದ ಅಧ್ಯಕ್ಷ ಭಾಷಣ.

---



# ಕವಿಯ ಬಾಳಿನ* ಕೊನೆಯ ದಿನಗಳು

◆ ಎಂ.ವಿ. ವೆಂಕಟೇಶಮೂರ್ತಿ

'... ... .... ನನ್ನ ದನಿ
ತಂಪಾದ ಸಂಜೆಯಲಿ ಗೆಳೆಯರಿಬ್ಬರು ಕುಳಿತು
ಎತ್ತರಕ್ಕೇರದೆಯೆ ಮಾತನಾಡುವ ರೀತಿ'

('ಅಡಿಗರ ಮಾತು', ಸಂಜೆಯ ಹಾಡು, ಕೆ.ಎಸ್.ನ)

ನಾಲ್ಕು ದಶಕಗಳ ಹಿಂದೆಂದೋ ಒಂದು ದಿನ ಹಿರಿಯರಾದ ವಿ.ಸೀ.ಯವರ ಮನೆಯಲ್ಲಿ ನನಗೆ ಕೆ.ಎಸ್.ನ ಅವರ ಪರಿಚಯವಾಯಿತು. ಮುಂದೆ ಆ ಪರಿಚಯ ಅಕ್ಷಯ ಸ್ನೇಹಸೌಭಾಗ್ಯವಾಗಿ ಬೆಳೆಯಿತು. ಚಾಮರಾಜಪೇಟೆಯಲ್ಲಿದ್ದು ಹೌಸಿಂಗ್ ಬೋರ್ಡ್ ಕಚೇರಿಯಲ್ಲಿ ಅವರು ಕೆಲಸ ಮಾಡುತ್ತಿದ್ದಾಗ, ಹಲವಾರು ವರ್ಷ ಬಹುಮಟ್ಟಿಗೆ ಪ್ರತಿದಿನ ಸಂಜೆ ವಿ.ಸೀ. ಅವರ ಮನೆಗೆ ಅವರು ಬರುತ್ತಿದ್ದರು. ಆಗೆಲ್ಲ ತಪ್ಪದೆ ಅವರ ಭೇಟಿಯಾಗುತ್ತಿತ್ತು. ಅಲ್ಲಿಂದ ವಿ.ಸೀ., ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳ ಜೊತೆಗೂಡಿ ಅವರೂ ಲಾಲ್‌ಬಾಗಿಗೆ ವಾಯುಸೇವನೆಗೆ ಹೋಗುತ್ತಿದ್ದರು. ಪ್ರತಿ ಸಂಜೆ ಕ್ಲುಪ್ತ ಸಮಯಕ್ಕೆ ಈ ತ್ರಿಮೂರ್ತಿಗಳು ಹೀಗೆ ಸಂಚಾರ ಹೊರಡುತ್ತಿದ್ದುದನ್ನು ನೋಡುವುದೇ ಕಣ್ಣಿಗೆ ಹಬ್ಬವಾಗಿತ್ತು. ಮೋಟಗಾನಹಳ್ಳಿಯವರು ತೀರಿಕೊಂಡ ಬಳಿಕ ಮೂವರಿದ್ದವರು ಇಬ್ಬರಾದರು. ಕಾಲಾನಂತರದಲ್ಲಿ ಕೆಎಸ್‌ನ ಹೌಸಿಂಗ್ ಬೋರ್ಡ್ ಸೇವೆಯಿಂದ ನಿವೃತ್ತರಾಗಿ ದಿನವೂ ಚಾಮರಾಜಪೇಟೆಗೆ, ವಿ.ಸೀ. ಅವರ ಮನೆಗ

---
* ಮಾಸ್ತಿಯವರ ಕ್ಷಮೆ ಕೋರಿ

ಬರುವುದು ತಪ್ಪಿ ವಾರಕ್ಕೊಮ್ಮೆ – ಸಾಮಾನ್ಯವಾಗಿ ಶನಿವಾರ ಸಂಜೆ ಅಥವಾ ಭಾನುವಾರ ಬೆಳಿಗ್ಗೆ – ಬರುತ್ತಿದ್ದರು. ಆಗಲೂ ಅಲ್ಲಿ ಅವರ ಭೇಟಿಯಾಗುತ್ತಿತ್ತು. ವಿ.ಸೀ. ತೀರಿಕೊಂಡ ಮೇಲೆ (೧೯೮೩), ಕೆಎಸ್‌ನ ಒಬ್ಬರೇ ಆಗಿಬಿಟ್ಟರು. ಆ ಬಳಿಕ ಅವರ ಮನೆಗೆ ಆಗೀಗ ನಾವು ಹೋಗಿಬರುತ್ತಿದ್ದನಾದರೂ ಕಾರಣಾಂತರಗಳಿಂದ ನಮ್ಮ ಭೇಟಿ ಅಪರೂಪವಾಯಿತು. ಆದಾಗ್ಯೂ ಅವರಲ್ಲಿನ ನನ್ನ ಗೌರವಾದರಗಳಿಗಾಗಲಿ, ನನ್ನ ಬಗೆಗಿದ್ದ ಅವರ ವಿಶ್ವಾಸಕ್ಕಾಗಲಿ ಯಾವುದೇ ಚ್ಯುತಿ ಬರಲಿಲ್ಲ. ನನ್ನ ಅಗತ್ಯವಿದ್ದಾಗೆಲ್ಲ ಕೂಡಲೇ ಬಂದು ಕಾಣುವಂತೆ ಅವರು ಒಂದು ಕಾರ್ಡ್ ಬರೆಯುತ್ತಿದ್ದರು (ಆಗ ಈಗಿರುವಂತೆ ಪ್ರತಿಮನೆಯಲ್ಲೂ ದೂರವಾಣಿ ಸೌಲಭ್ಯವಿರಲಿಲ್ಲವಾಗಿ). ಆ ಘಟ್ಟ ಕಳೆದು ಈಚಿನ ಎಂಟು-ಹತ್ತು ವರ್ಷ ಅವಧಿಯಲ್ಲಿ ಮತ್ತೆ ಅವರ ಆಪ್ತ ಸಂಪರ್ಕದ ಸುಯೋಗ ನನ್ನ ಪಾಲಿಗೆ ಒದಗಿದ್ದು ನನ್ನ ಬದುಕಿನ ಪುಣ್ಯಾಂಶಗಳಲ್ಲೊಂದು. ಕೊನೆಕೊನೆಗೆ ತಮ್ಮ ಕಿರಿಯ ಸೋದರನೆಂಬಂತೆಯೇ ಕಂಡು, ಕರೆದು, ತಮ್ಮ ನಿರ್ವ್ಯಾಜ ಪ್ರೀತಿ-ವಿಶ್ವಾಸಗಳನ್ನು ಅವರು ನನಗೆ ಕಾಣಿಸಿದ್ದುಂಟು.

ನಮ್ಮ ಬಾಂಧವ್ಯವನ್ನು ಬೆಸೆದದ್ದು ಮುಖ್ಯವಾಗಿ ಎರಡು ಅಂಶಗಳು. ಒಂದು : ವಿ.ಸೀ. ಅವರಲ್ಲಿ ನಮ್ಮಿಬ್ಬರಿಗೂ ಇದ್ದ ಅಪಾರ ಸ್ನೇಹ ಗೌರವ. ಎರಡನೆಯದು : ಸಾಹಿತ್ಯ ಪ್ರೀತಿ. (ಮೂರನೆಯ ಇನ್ನೊಂದು ಸಣ್ಣ ಸಂಗತಿ: ಅವರ ಹುಟ್ಟೂರಾದ ಕಿಕ್ಕೇರಿಗೆ ಆರೇ ಮೈಲಿ ದೂರದಲ್ಲಿದ್ದ ಒಂದು ಹಳ್ಳಿಯವರು ನನ್ನ ಹಿರಿಯರು ಎಂಬುದು.) ಅವರೊ, ಹೇಳಿ ಕೇಳಿ ಸುವಿಖ್ಯಾತ ಕವಿ. ವಯಸ್ಸಿನಲ್ಲಿ ನನಗಿಂತ ತುಂಬಾ ಹಿರಿಯರು. ನಾನೊ ತೀರ ಕಿರಿಯ. ಆದರೆ ವಯಸ್ಸಿನ ಅಂತರ ನಮ್ಮ ಸ್ನೇಹಕ್ಕೆ ಎಂದೂ ಅಡ್ಡಿಯಾಗಲಿಲ್ಲ. ಮನೆಯ ಪ್ರತಿಕೂಲ ವಾತಾವರಣ, ಅನನುಕೂಲಕರ ಆರ್ಥಿಕ ಪರಿಸ್ಥಿತಿ, ವೃದ್ಧಾಪ್ಯಸಹಜ ಒಂಟಿತನ, ಪ್ರತಿಯೊಂದಕ್ಕೂ ಅನಿವಾರ್ಯವಾಗಿದ್ದ ಪರಾವಲಂಬನೆ, ಅನಾರೋಗ್ಯ, ಎಲ್ಲಕ್ಕಿಂತ ಹೆಚ್ಚಾಗಿ ದಿನೇದಿನೇ ಹೆಚ್ಚುತ್ತಿದ್ದ ದೃಷ್ಟಿ ತೊಂದರೆ — ಇವುಗಳಿಂದಾಗಿ ಒಂದು ಹಂತದಲ್ಲಿ ತಮ್ಮ ಕಾವ್ಯ ಸೃಜನೆಯ ಕೃಷಿಯನ್ನು ನಿಲ್ಲಿಸಿಬಿಡಲು ಕೆಎಸ್‌ನ ನಿರ್ಧರಿಸಿದ್ದರು. ಆ ಸಂದರ್ಭದಲ್ಲಿ ನಾನು ಅವರಿಗೆ ಹೆಚ್ಚು ಹತ್ತಿರವಾದೆ. ಅವರು ಹಾಗೆ ನಿಲ್ಲಿಸಬಾರದೆಂದೂ ಅವರ ಉತ್ಕೃಷ್ಟ ಕಾವ್ಯ ಕುಸುಮಗಳು ಇನ್ನಷ್ಟು ಕಾಲ ನಾಡಿಗೆ ದೊರೆಯುತ್ತಿಬೇಕೆಂದೂ ಅವರನ್ನು ಒತ್ತಾಯಪಡಿಸಿದೆ. ಅವರಿಗೆ ಹೊಳೆಹೊಳೆದುದನ್ನು ನನಗೆ ಹೇಳಿ ಬರೆಸುವಂತೆ ಒಪ್ಪಿಸುವಲ್ಲಿ ಯಶಸ್ವಿಯಾದೆ. ಲಿಪಿಕಾರನಾಗಿ ಅವರು ಹೇಳಿದುದನ್ನು ಬರೆದುಕೊಂಡು, ಆ ಬಳಿಕ ಅವರಿಗೆ ನಾಲ್ಕಾರು ಸಲ ಓದಿ, ಅವರು ಪರಿಷ್ಕರಿಸಿದ ಮೇಲೆ ಅಚ್ಚಿಗಾಗಿ ಉತ್ತಮ ಪ್ರತಿ ತಯಾರಿಸಿಕೊಡುವ, ಅಗತ್ಯಬಿದ್ದರೆ ಪ್ರಕಟಿಸುವ ನೆರವಿನ ಭರವಸೆಯನ್ನಿತ್ತೆ. ಹಾಗೆ ಅವರಿಗೆ ನನ್ನ ಮನೆಯೂ ನಾನು ಕೆಲಸ ಮಾಡುತ್ತಿದ್ದ ಬ್ಯಾಂಕ್ ಶಾಖೆಯೂ ಹತ್ತಿರವಾಗಿದ್ದುದು ನನಗೆ ಸಹಕಾರಿಯಾಯಿತು. ಸುಮಾರು ಎರಡು ದಶಕ ಕಾಲ ವಿ.ಸೀ. ಅವರಿಗೆ ನಾನು, ನನ್ನ ಸೋದರ ಈ ಬಗೆಯ ನೆರವಿತ್ತುದನ್ನು ಸ್ವಯಂ ಬಲ್ಲವರಾಗಿದ್ದ, ಮೆಚ್ಚಿದ್ದ ಕೆಎಸ್‌ನ ನನ್ನ ಮನವಿಯನ್ನು ಪುರಸ್ಕರಿಸಿದರು. ಅದರಂತೆ ಪ್ರತಿದಿನ ಸಂಜೆ (ಭಾನುವಾರ ಇತ್ಯಾದಿ ರಜಾ ದಿನಗಳಲ್ಲಿ ಬೆಳಿಗ್ಗೆ) ಕನಿಷ್ಠ ಎರಡು ಗಂಟೆಗಳನ್ನು ಅವರೊಡನೆ ಕಳೆಯತೊಡಗಿದೆ. ಸ್ವಲ್ಪಮಟ್ಟಿಗೆ ಅವರ ಒಂಟಿತನದ ಬೇಸರವೂ ಇದರಿಂದ ಕಡಿಮೆಯಾಗಿ, ಸಾಹಿತ್ಯ ಸಲ್ಲಾಪ ಹೆಚ್ಚಾಗುತ್ತಾ ಹೋಯಿತು. ಅವರು ಇಚ್ಛಿಸಿದ ಇಂಗ್ಲಿಷ್-ಕನ್ನಡ ಲೇಖನಗಳನ್ನು, ಕೃತಿಗಳನ್ನು ಅವರಿಗೆ ಓದಲಾರಂಭಿಸಿದೆ. ಏನಾದರೂ ಕಾರ್ಯಕ್ರಮವನ್ನೊಪ್ಪಿ ಅವರು ಪ್ರವಾಸ ಹೊರಟಂದು ಅವರಿಗೆ ಜೊತೆಗೊಡುತ್ತಿದ್ದೆ. ಅವರ ಪತ್ರವ್ಯವಹಾರ, ಬ್ಯಾಂಕ್ ವ್ಯವಹಾರ ಇತ್ಯಾದಿಯನ್ನೂ ನಿರ್ವಹಿಸುತ್ತಿದ್ದೆ. ಇವೆಲ್ಲದರಿಂದ ಕಾವ್ಯ ರಚನೆಯ ಬಗೆಗೆ ಅಗತ್ಯ ಚಿಂತನ, ಆಲೋಚನೆ ನಡೆಸಲು ಅವರಿಗೆ ಹೆಚ್ಚು ಅನುಕೂಲವಾಯಿತು.

ಮೊದಲು ಅವರಿಗೆ ಬಹುಕಾಲದಿಂದ ಪ್ರಿಯವಾಗಿದ್ದ ಬರ್ನ್ಸ್ ಕವಿಯ ಕೆಲವು ಪ್ರೇಮಗೀತೆಗಳನ್ನು ಆಯ್ದು ಅನುವಾದಿಸುವ ಕಾರ್ಯಕ್ಕೆ ತೊಡಗಿದೆವು. ತರುವಾಯ ನನಗೆ ತುಂಬ ಪ್ರಿಯವಾಗಿದ್ದ ಚೀನೀ ಕವನಗಳ ಇಂಗ್ಲಿಷ್ ಭಾಷಾಂತರವನ್ನು ಅವರಿಗೆ ನಾಲ್ಕಾರು ಸಲ ಓದಿದೆ. ಅವರ ಮನೋಧರ್ಮಕ್ಕೆ ತೀರಾ ಹತ್ತಿರವಾಗಿದ್ದ ಕಾರಣ, ಅವು ಅವರಿಗೂ ಮೆಚ್ಚಿಕೆಯಾದವು. ಕೆಲವನ್ನಾದರೂ ಕನ್ನಡಿಸಿಕೊಡಲು ವಿನಂತಿಸಿದೆ. ಆಯ್ದ ಇಪ್ಪತ್ತೈದನ್ನು ಕನ್ನಡಕ್ಕೆ ತಂದೆವು. ಅವರ ಕೋರಿಕೆಯಂತೆ 'ವಿ.ಸೀ. ಸಂಪದ' ವೇದಿಕೆಯಿಂದ ಎರಡೂ ಸಂಕಲನಗಳನ್ನು ಪ್ರಕಟಿಸಿದ್ದು ಅವರಿಗೆ ಹರ್ಷ ತಂದಿತು. ಈ ನಡುವೆ ಪಾಲ್‌ಗ್ರೇವ್‌ರ 'ಗೋಲ್ಡನ್ ಟ್ರೆಷರಿ'ಯಿಂದ ೧೫-೨೦ ಇಂಗ್ಲಿಷ್ ಕವನಗಳ ಅನುವಾದಕ್ಕೆ ತೊಡಗಿದೆವು. ಆದರೆ ಅನುವಾದ ಅವರಿಗೆ ತೃಪ್ತಿ ಕೊಡದೆಹೋದ ಕಾರಣ ಅವನ್ನು ಪ್ರಕಟಿಸಲಿಲ್ಲ. ಚಾರ್ಲ್ಸ್ ಮತ್ತು ಮೇರಿ ಲ್ಯಾಂಬ್‌ರ 'ಟೇಲ್ಸ್ ಫ್ರಂ ಷೇಕ್ಸ್‌ಪಿಯರ್' ನಾಟಕ ಕಥೆಗಳನ್ನು ಅನುವಾದಿಸಲು ಇಷ್ಟಪಟ್ಟು ಪ್ರಾರಂಭಿಸಿದರು. ಆದರೆ ಮುಂದುವರೆಯಲಿಲ್ಲ. ಅನುವಾದ ಕಾರ್ಯ ಅಲ್ಲಿಗೇ ನಿಂತುಹೋಯಿತು.

ಈ ಹಂತದಲ್ಲಿ ತಮ್ಮ ಸ್ವಂತ ರಚನೆಗಳನ್ನು ಹೇಳಿ ಬರೆಸಬೇಕೆಂದು ಅವರನ್ನು ಒತ್ತಾಯಪಡಿಸಲಾರಂಭಿಸಿದೆ. ನನ್ನ ಕಾಟವನ್ನು ತಡೆಯಲಾರದೆ, ಆ ಬಗೆಗೆ ಯೋಚಿಸುತ್ತಿರುವೆನೆಂದೂ ಕೆಲವೇ ದಿನಗಳಲ್ಲಿ ಹೇಳಿ ಬರೆಸಲು ತೊಡಗುವೆನೆಂದೂ ತಿಳಿಸಿದರು. ಒಂದೆರಡು ವಾರ ಬಳಿಕ ಹೇಳಿ ಬರೆಸಲುಪಕ್ರಮಿಸಿದರು. ಆನಂತರ ಐದು ವರ್ಷ ಅವಧಿಯಲ್ಲಿ ಸುಮಾರು ಇನ್ನೂರಕ್ಕೂ ಹೆಚ್ಚು ಸ್ವತಂತ್ರ ಕವನಗಳನ್ನು – ಒಂದು ದೀರ್ಘ ಕಥನ ಕವನವೂ ಸೇರಿದಂತೆ – ಹಾಗೆ ಹೇಳಿ ಬರೆಸಿದರು. ಆರು ಸಂಕಲನಗಳಲ್ಲಿ ಅವು ಸಂಗ್ರಹಗೊಂಡು ಸಹೃದಯರ ಕೈಸೇರಿದುವು. ಆಯಾ ಸಂಗ್ರಹಗಳ ಕವನಗಳ ಆಯ್ಕೆ, ಅವುಗಳ ಅನುಕ್ರಮಣಿಕೆಯ ವ್ಯವಸ್ಥೆ ಶೀರ್ಷಿಕೆ, ಕರಡು ತಿದ್ದುವಿಕೆ ಇತ್ಯಾದಿ ಎಲ್ಲ ಹೊಣೆಯನ್ನೂ ನನಗೇ ವಹಿಸಿದರು. 'ಸಂಜೆ ಹಾಡು' ಸಂಗ್ರಹಕ್ಕೆ ಮುನ್ನುಡಿ ರೂಪದಲ್ಲಿ ಕೆಲವು ಮಾತುಗಳನ್ನು ನಾನೇ ಬರೆಯಬೇಕೆಂದು ಆದೇಶಿಸಿದರು. 'ಮುನ್ನುಡಿ' ಎಂದರೆ ಧಾರ್ಷ್ಟ್ಯವಾದೀತೆಂದು ನನಗೆ ತೋಚಿದ್ದನ್ನು 'ಅರಿಕೆ'ಯೆಂದು ಬರೆದೆ. ಹೀಗೆ ನಾಲ್ಕು ವರ್ಷಗಳಲ್ಲಿ ಆರು ಕವನ ಸಂಕಲನಗಳ ಪ್ರಕಟಣೆ ಅವರ ಮನಸ್ಸಿಗೆ ಹೆಚ್ಚು ಸಂತೋಷ ತಂದುಕೊಟ್ಟುದನ್ನು ಮತ್ತೆ ಮತ್ತೆ ಸ್ಮರಿಸುತ್ತಿದ್ದರು.

ಈ ರೀತಿ ಏಳೆಂಟು ವರ್ಷ ಪ್ರತಿದಿನ ಜೊತೆಯಲ್ಲಿ ಕಳೆದ ಅವಧಿಯಲ್ಲಿ ಹೆಚ್ಚು ಹೊತ್ತು ನಮ್ಮ ಸಾಹಿತ್ಯ ಸಲ್ಲಾಪಕ್ಕೇ ವಿನಿಯೋಗವಾಗುತ್ತಿತ್ತು. ಅವರ ಮಾತಿನ ನಡುವೆ ಮಿನುಗಿ ಮಿಂಚಿ ಮಾಯವಾಗುತ್ತಿದ್ದ ವಿವಿಧ ವಿಷಯಗಳ ಕುರಿತ – ಮುಖ್ಯವಾಗಿ ಸಾಹಿತ್ಯ - ಅವರ ಚಿಂತನೆ, ಅಭಿಪ್ರಾಯಗಳನ್ನು ಅರಿತುಕೊಳ್ಳುವ, ಸ್ಥೂಲವಾಗಿ ಟಿಪ್ಪಣಿ ಮಾಡಿಕೊಳ್ಳುವ ಸದವಕಾಶವೂ ನನಗೆ ದೊರೆಯಿತು. ಆ ಅಭಿಪ್ರಾಯಗಳಲ್ಲಿ ಹೊಸತೇನೂ ಇಲ್ಲವೆನಿಸಬಹುದು; ಅವು profound or seminal ಎಂದೇನೂ ಎನ್ನಿಸದಿರಬಹುದು. ಆದರೆ ನಮ್ಮ ಕಾಲದ 'Master craftsman' ಒಬ್ಬರ ಅನುಭವಜನ್ಯ ಅಭಿಪ್ರಾಯ ಅವಾದ್ದರಿಂದ ಬೆಲೆಯುಳ್ಳವೆಂದೇ ನನ್ನ ನಂಬಿಕೆ. 'Notes', 'Journals' ಎಂಬ ಶೀರ್ಷಿಕೆಯಲ್ಲಿ ಪಾಶ್ಚಾತ್ಯ ಲೇಖಕರ ಹಲವರು ತಮ್ಮ ಚಿಂತನೆ, ಅಭಿಪ್ರಾಯಗಳನ್ನು ಸ್ವಯಂ ಬರೆದು ಪ್ರಕಟಿಸಿರುವುದುಂಟು. ಅಲ್ಲಿನ ವಿಪುಲತೆಯಾಗಲಿ, ವ್ಯಾಪ್ತಿ, ವಿಸ್ತಾರ ವೈವಿಧ್ಯಗಳಾಗಲಿ ಇಲ್ಲಿಲ್ಲ. ಅಲ್ಲದೆ ಅದು ಉದ್ದೇಶಪೂರ್ವಕವಾಗಿ ನುಡಿದುವಲ್ಲ; ಸಿದ್ಧ ಪ್ರಶ್ನೆಗಳಿಗೆ ಅವರು ನೀಡಿದ ಉತ್ತರವೂ ಅಲ್ಲ. ಹಿಂದೆಯೇ ಹೇಳಿದಂತೆ, ವಿವಿಧ ಸಂದರ್ಭಗಳಲ್ಲಿ ಸಾಮಾನ್ಯ ಮಾತುಕತೆಯ ನಡುವೆ ಮೂಡಿಬಂದ ಸಹಜ ಅಭಿಪ್ರಾಯ, ಚಿಂತನೆಗಳ ತುಣುಕು ಇವು. ಇವನ್ನು ಹೀಗೆ ಸಂಕಲಿಸುವಾಗ, ನನ್ನ ಮಟ್ಟಿಗೆ ಹೇಳುವುದಾದರೆ, ಸ್ವಯಂ ಕೆ.ಎಸ್.ನ ಅವರು ನನ್ನ ಸಮೀಪವೇ ಕುಳಿತು ಹಿಂದೆ ಆ ಮಾತುಗಳನ್ನಾಡಿದ್ದಂತೆಯೇ ಈಗ ಮತ್ತೊಮ್ಮೆ ಆಪ್ತವಾಗಿ

ಮಾತನಾಡುತ್ತಿದ್ದಾರೆಂದೇ ನನಗೆ ಭಾಸವಾಗುತ್ತಿದೆ. ಗತಿಸಿಹೋದ ಕಾಲದ ಕೆಲವು ಜೀವಂತ ಕ್ಷಣಗಳನ್ನು ಈ ಮೂಲಕ ಮತ್ತೊಮ್ಮೆ ನಾನು ವರ್ತಮಾನದಲ್ಲಿ ಪುನರನುಭವಿಸುವಂತಾಗಿದೆ: ಆ ದಿನಗಳನ್ನು ಪುನರ್ಜೀವಿಸುವಂತಾಗಿದೆ.

೨

'ಕಣ್ಣು ಹೋಗಿದ್ದರೂ ಕವಿತೆ ನಿಲ್ಲಲಿ ಇಲ್ಲ;
ಒಳಗಣ್ಣ ಮುಂದೆ ನಾನು ನನ್ನ ಕವಿತೆಯ ಕಂಡೆ,
ಕವಿತೆ ನಾನಾದ ಕಣ್ಣು ತೆರೆದು ಕಂಡಿತು ನನ್ನ'

('ಕಾಣುವುದಷ್ಟೆ ನೋಟವೆ?' ದೀಪ ಸಾಲಿನ ನಡುವೆ, ಕೆಎಸ್‌ನ)

ಬನಶಂಕರಿ ಬಡಾವಣೆಯ ಮೂರನೆಯ ಹಂತದ ಎರಡನೆಯ ತಿರುವಿನಲ್ಲಿ ಎತ್ತರದ ಎರಡು ಭವ್ಯ ಸೌಧಗಳ ನಡುವೆ ಇರುವ ಮಹಡಿಯುಳ್ಳದ ಚಿಕ್ಕಮನೆಯೇ ಕೆಎಸ್‌ನರದು. ಆ ಮನೆಗೆ 'ಕಾವ್ಯಶ್ರೀ'ಗಿಂತ ಸಾರ್ಥಕವಾದ ಹೆಸರೊಂದು ಅನ್ವರ್ಥ ನಾಮ ಸಾಧ್ಯವೇ ಇಲ್ಲ. 'ಕಾವ್ಯಶ್ರೀ'ಯ ಹೊರ ಅಂಗಳದಲ್ಲಿರುವ ಕಿಟಕಿಗೆ ಸಮೀಪವಾಗಿ, ರಸ್ತೆಗೆ ಎದುರಾಗಿದ್ದ ಬೆತ್ತದ ಕುರ್ಚಿಯಲ್ಲಿ ಒಂದು ಮೊಣಕಾಲಿನ ಮೇಲೆ ಇನ್ನೊಂದನ್ನು ಹಾಕಿಕೊಂಡು, ಬಿಳಿಯ ಪಂಚೆ ಉಟ್ಟು ಬಿಳಿಯ ಜುಬ್ಬ ಧರಿಸುತ್ತಿದ್ದ (ಅಥವಾ ಬಿಳಿ ಬನಿಯನ್ ತೊಡುತ್ತಿದ್ದ) ಕೆಎಸ್‌ನ ಬಿಸಿಲು ಚಳಿ ಗಾಳಿಗಳನ್ನು ಲೆಕ್ಕಿಸದೆ ನೆರಳಿನಲ್ಲಿ ಹಗಲಿಡೀ ಕುಳಿತಿರುತ್ತಿದ್ದುದು ಯಾರೂ ಕಾಣಬಹುದಾಗಿದ್ದ ಸಾಮಾನ್ಯ ದೃಶ್ಯ. ಕೈಯಲ್ಲಿ ಸರ್ವದಾ ಹಿಡಿದಿರುತ್ತಿದ್ದ ನಶ್ಯದ ಡಬ್ಬಿ. ಆಗಾಗ ಅದರಿಂದ ಒಂದೆರಡು ಚಿಟಿಕೆ ನಶ್ಯದ ಪುಡಿ ಹೊರ ತೆಗೆದು ಮೂಗಿಗೇರಿಸಿ ಕರವಸ್ತ್ರದಿಂದ ಮೂಗೊರೆಸಿಕೊಳ್ಳುವರು. (ಹಾಕಿಕೊಳ್ಳುವುದಕ್ಕಿಂತ ಅಂಗೈಯಿಂದ ನೆಲಕ್ಕೆ ಚೆಲ್ಲಿ ಹೋಗುತ್ತಿದ್ದ ನಶ್ಯದ ಭಾಗವೇ ಹೆಚ್ಚಾಗಿರುತ್ತಿತ್ತು.) ಕಾಣದಂತಾಗಿದ್ದ ಕಣ್ಣಿಗೊಂದು ದಪ್ಪ ಕಪ್ಪು ಅಥವಾ ಕಂದುಬಣ್ಣದ ಕಟ್ಟಿನ ಗಾಜಿನ ಕನ್ನಡಕ. ಧೂಳು ಬೀಳದಿರಲೆಂದು ಅದನ್ನು ಅವರು ಸದಾ ಹಾಕಿಕೊಂಡಿರುತ್ತಿದ್ದರು. ಗಂಟೆ ನೋಡಿಕೊಳ್ಳಲಾಗದಿದ್ದರೂ ಅಭ್ಯಾಸಬಲದಿಂದೆಂಬಂತೆ ಕೈ ಗಡಿಯಾರ ವೊಂದನ್ನು ಕಟ್ಟಿಕೊಂಡಿರುತ್ತಿದ್ದರು. 'ಗಡಿಯಾರ, ಕೈಗೊಂದು ಅಲಂಕಾರ' ಎಂಬುದು ಅವರದೇ ಮಾತು. (ಹಾಗೇ, 'ನನಗೆ ಕಣ್ಣು ಕಾಣೋಲ್ಲ, ಅವಳಿಗೆ – ಶ್ರೀಮತಿ ವೆಂಕಮ್ಮನವರಿಗೆ – ಕಿವಿ ಕೇಳೋಲ್ಲ; ಜೊತೆ ಸರಿಯಾಗಿದೆ! – ಎಂದು ಹಾಸ್ಯ ಚಟಾಕಿಯನ್ನೂ ಹಾರಿಸುತ್ತಿದ್ದರು). ಬಲಗೈನ ಎರಡು ಬೆರಳು ಗಲ್ಲದ ಕೆಳಭಾಗವನ್ನು ಹಿಡಿದಿರುತ್ತಿತ್ತು; ಎಡಗೈ ಹೆಬ್ಬೆರಳು ಇನ್ನೊಂದು ಬೆರಳಿನ ಮೇಲ್ತುದಿಯನ್ನು ಮೃದುವಾಗಿ ಸವರುತ್ತಿರುತ್ತಿತ್ತು. ಏನನ್ನೋ ಯೋಚಿಸುತ್ತಿರುವಂತೆ ಕತ್ತು ಎಡಕ್ಕೆ ತುಸು ವಾಲಿದ್ದು ದೃಷ್ಟಿ ಎಲ್ಲಿಯೋ ನೆಟ್ಟಿರುತ್ತಿತ್ತು. ಒಟ್ಟಾರೆ ಒಂದು ಧ್ಯಾನಸ್ಥ ಸ್ಥಿತಿಯಲ್ಲಿ ಮುಳುಗಿರುವಂತೆ ಕಾಣಿಸುತ್ತಿದ್ದರು. ಅವರ ಎಡಪಕ್ಕದಲ್ಲಿ ಕಾಂಪೌಂಡ್‌ಗೆ ಒರಗಿದಂತೆ ಇನ್ನೆರಡು ಬೆತ್ತದ ಕುರ್ಚಿಗಳಿರುತ್ತಿದ್ದವು. ಒಂದರಲ್ಲಿ ನಾನು ಕುಳಿತುಕೊಳ್ಳುತ್ತಿದ್ದೆ; ಮತ್ತೊಂದು ಅತಿಥಿಗಳಿಗೆ ಮೀಸಲು. ಅವರನ್ನು ಕಾಣಲು ಬಂದು ಹೋಗುವವರೊಡನೆ ಅಲ್ಲಿಯೇ ಮಾತುಕತೆ; ಅಲ್ಲಿಯೇ ನಮ್ಮ ಸಾಹಿತ್ಯ ಸಲ್ಲಾಪ; ಅಲ್ಲಿಯೇ ಅವರ ಕಾವ್ಯಸೃಜನೆ – ಹೇಳಿ ಬರೆಸುವಿಕೆ– ನಡೆಯುತ್ತಿದ್ದುದು. ಸ್ನಾನ, ತಿಂಡಿ, ಊಟ, ವಿಶ್ರಾಂತಿ ಸಮಯಗಳಲ್ಲಿ ಒಳಗೆ ಹೋಗುತ್ತಿದ್ದುದನ್ನು ಬಿಟ್ಟರೆ, ದಿನದ ಬಹುಪಾಲು ಸಮಯವನ್ನು ಅಲ್ಲಿಯೇ ಕಳೆಯುತ್ತಿದ್ದರು. ರಸ್ತೆಯಲ್ಲಿ ಸಾಗುತ್ತಿದ್ದ ಯಾರಾದರೂ ಪರಿಚಿತರೊ, ಅಪರಿಚಿತರೊ ನಮಸ್ಕರಿಸಿದರೆ ಪ್ರತಿವಂದನೆ ಸಲ್ಲಿಸುವುದು, ಮಾತಾಡಿದರೆ ಪ್ರತಿಮಾತು, ಮಕ್ಕಳು ಓಡಿಯಾಡಿ 'ತಾತಾ' ಎಂದು ಕರೆದರೆ ಅವರಿಗೊಂದು

ಮಾತಿನ ಉತ್ತರ, ನಸುನಗೆ ಕಾಣಸುತ್ತಿದ್ದರು. ಸ್ವಭಾವತಃ ಮೌನಪ್ರಿಯರು; ಸಾಮಾನ್ಯವಾಗಿ ಮಿತಭಾಷಿ. ಹತ್ತಿರದ ನೆಂಟರಿಷ್ಟರೊಡನೆಯೂ ಉಭಯಕುಶಲೋಪರಿ ಬಿಟ್ಟರೆ ಮೂರನೆಯ ಮಾತಿಲ್ಲ. ಮನೆಮಂದಿಯೊಂದಿಗೂ ಅಷ್ಟೆ. ಅವರ ಈ ಸ್ವಭಾವ ಅಪಾರ್ಥಕ್ಕೆಡೆಗೊಟ್ಟು ಅವರನ್ನು ತಪ್ಪು ತಿಳಿದಿರುವವರೂ ಉಂಟು. ಆದರೆ ಮನಸ್ಸು ಸಡಿಲಿಸಿದಾಗ ಸಮಾನಮನಸ್ಕರೊಂದಿಗೆ ಹೃದಯಬಿಚ್ಚಿ ಆಪ್ತವಾಗಿ Warm ಆಗಿ ಮಾತನಾಡಬಲ್ಲವರು. ಆಗಲೂ ಮಾತು ಹೆಚ್ಚಿಲ್ಲವೆಂದೇ ಹೇಳಬೇಕು. ಆಡಿದ ಮಾತೂ ಬಹುಮಟ್ಟಿಗೆ ಕಾವ್ಯವೇ ಆಗಿರುತ್ತಿತ್ತು. ಆದರೆ ಬೇರೆಯವರು ಆಡಿದ ಪ್ರತಿಯೊಂದು ಪದವನ್ನೂ ಸಮಾಧಾನದಿಂದ, ಸಹನೆಯಿಂದ ಕೇಳುತ್ತಿದ್ದರು. ೮೯ರಲ್ಲಿಯೂ ಅವರ ಶ್ರವಣಶಕ್ತಿ ತುಂಬಾ Sharp. ಚುರುಕಾಗಿತ್ತು, ಸೂಕ್ಷ್ಮವಾಗಿತ್ತು. ಅವರ ನೆನಪಿನ ಶಕ್ತಿಯಂತೂ ಅದ್ಭುತವಾಗಿತ್ತು. ಹಳಗನ್ನಡ, ಹೊಸಗನ್ನಡ, ಇಂಗ್ಲಿಷ್, ಸಂಸ್ಕೃತ ಕಾವ್ಯಗಳಿಂದ ಹತ್ತು ಹಲವು ಸಾಲುಗಳನ್ನು ನೆನಪಿನಿಂದಲೇ ಉದ್ಧರಿಸುತ್ತಿದ್ದರು. ನಲವತ್ತು ವರ್ಷ ಹಿಂದೆ ಬರೆದಿದ್ದ ಅವರದೇ ಕವಿತೆಗಳ ಸಾಲುಸಾಲು ಅವರಿಗೆ ವಾಚೋವಿಧೇಯವಾಗಿದ್ದುವು. ಮಾತಿನ ನಡುವೆ ಏನನ್ನಾದರೂ ಸಮರ್ಥಿಸಲು ಅವರು ಅವನ್ನು ಹೇಳುತ್ತಿದ್ದುದುಂಟು. ಅವರ ಕಾವ್ಯದ ಬಗೆಗೆ ಮಾತು ಬಂದಾಗ, 'ಸಂಸಾರದ ಜಂಜಡಗಳು ಇಲ್ಲದೆ ಹೋಗಿದ್ರೆ, ಇನ್ನಷ್ಟು ಚೆನ್ನಾಗಿ ಬರೀಬಹುದಾಗಿತ್ತು. ಅದು ಆಗಲಿಲ್ಲ. 'ನಷ್ಟವಿಲ್ಲ ಬಿಡಿ''ಎಂದು ನಾಲ್ಕಾರು ಸಲ ಅವರು ಆಡಿದ್ದುಂಟು. 'ಆಗ ಇಷ್ಟು ಕೆಲಸವೂ ಆಗುತ್ತಿರಲಿಲ್ಲವೋ ಏನೋ ಹೇಳೋಕಾಗೊಲ್ಲ, ಅಲ್ಲವೆ ಸರ್? ನೀವೇ ಬರೆದಿರೋ ಹಾಗೆ 'ಕತ್ತಲೆಯಲಿ ಬತ್ತಲೆಯಲಿ ತಾನೆ ಬದುಕು ತಲೆಗವರುವುದು?' ಹಾಗೇ ಸಂಸಾರದ ಈ ಜಂಜಡ, ಅಸೌಕರ್ಯಗಳ ನಡುವೆಯೇ ನಮ್ಮ ಅನುಭವ ಪ್ರಪಂಚ, ಭಾವಪ್ರಪಂಚ ವಿಸ್ತರಿಸಿ ನಿಮ್ಮ ಕಾವ್ಯ ಹುಟ್ಟಿರೋದು?' ಎಂದೆ. 'ಹೂಂ, ಅದೂ ಸರಿಯೇ. ಆದರೂ ಮನೇಲಿ ಸ್ವಲ್ಪ ನಿರಾಳವಾಗಿದ್ದಿದ್ರೆ. I colud have done much better. ಏನು ಮಾಡಲಿ, ಮನೇ frictions ನಡುವೆಯೇ ನನ್ನ ಪದ್ಯ ಹುಟ್ಟಬೇಕಾಗಿದೆ' ಎಂದರು. ಅವರ ಮಾತಿನಲ್ಲಿ ವಿಷಾದದ ಛಾಯೆಯಿತ್ತು; ಆದರೆ ಅದರಿಂದ ನಿರುತ್ಸಾಹಗೊಂಡಿರಲಿಲ್ಲ. ವಿ.ಸೀ. ಕೂಡ ಹೀಗೇ ಹೇಳುತ್ತಿದ್ದರು. ಬಿಎಂಶ್ರೀ ಅವರ ಸಂಬಂಧದಲ್ಲಿ ಪ್ರೊ. ಮೂರ್ತಿರಾಯರು ಒಂದೆಡೆ 'Literature played the part of Eppie in his life' ಎಂಬಂತೆ ನುಡಿದಿದ್ದಾರೆ. ಆ ಮಾತು ವಿ.ಸೀ. – ಕೆಎಸ್‌ನರಿಗೂ ಅಕ್ಷರಶಃ ಅನ್ವಯಿಸುತ್ತದೆ. ಕಾವ್ಯವೇ ಕೆಎಸ್‌ನರಿಗೆ ಬದುಕಿನಲ್ಲಿ ಸಂತೋಷವನ್ನು, ಮುದವನ್ನು ತಂದುಕೊಟ್ಟದ್ದು; ಕಷ್ಟಕಾರ್ಪಣ್ಯಗಳನ್ನು ಸಹಿಸಿ ಬದುಕನ್ನು ಎದುರಿಸಬಲ್ಲ ಶಕ್ತಿಯನ್ನು ನೀಡಿದ್ದು. ಒಂದು ಸಲವಂತೂ 'poetry ಇಲ್ಲದಿದ್ರೆ ನಾನು ಸತ್ತೇ ಹೋಗಿದ್ದೀನಿ' ಎಂದರು. ಅವರು ಕಾವ್ಯದಿಂದ ಬದುಕಿದರು; ಕಾವ್ಯಕ್ಕಾಗಿ ಬದುಕಿದರು. 'Life has become a boredom. It has become mechanical. ಎಳ್ಳಷ್ಟೂ ನೆಮ್ಮದಿ ಅನ್ನೋದು ಇರೋಲ್ಲ. ನಮ್ಮ ಮನೆ ಬಿಡಿ; ಯಾರ ಮನೆಗೆ ಬೇಕಾದರೂ ಹೋಗಿ ನೋಡಿ; ಏನಾದರೊಂದು ಗೋಳು ಇದ್ದೇ ಇರುತ್ತೆ. ಹೊಟ್ಟೆಪಾಡು, ಬದುಕು ಇವೇ ಒಂದು ದೊಡ್ಡ ಸಮಸ್ಯೆ ಆಗಿರುವಾಗ ಕಾವ್ಯ, ಸಾಹಿತ್ಯ ಯಾರಿಗೆ ಬೇಕು?' ಎಂದು ಪದೇಪದೇ ಉದ್ಗರಿಸುತ್ತಿದ್ದರು. ಹೀಗಿದ್ದರೂ 'ಕಷ್ಟ ಕಂಡಷ್ಟೂ ಸೌಂದರ್ಯ ಆಕರ್ಷಕವಾಗುತ್ತೆ. ಕಷ್ಟ ಕಂಡಿರಬೇಕು. ಕಷ್ಟಗಳನ್ನು ಅನುಭವಿಸಿ ಸುಖವನ್ನು ಕುರಿತು ಹಾಡಬೇಕು' ಎಂದೇ ಅವರು ಹೇಳುತ್ತಿದ್ದುದು. ಅದೇ ಅವರ ಮ್ಯಾನಿಫೆಸ್ಟೊ ಕೂಡ:

'ನೊಂದ ನೋವನ್ನಷ್ಟೆ ಹಾಡಲೇಬೇಕೇನು?
ಬೇಡವೇ ಯಾರಿಗೂ ಸಿರಿಮಲ್ಲಿಗೆ?'

'ರಾತ್ರಿ ಹೊತ್ತು ನಿದ್ದೆ ಬರೋದಿಲ್ಲ. ಹೊಸ ಕವನದ ಸಾಲುಗಳು ತಲೆಯ ತುಂಬಾ ದಾಳಿ ಇಡುತ್ತವೆ, ಒಂದಾದ ಮೇಲೊಂದು. ತಾವಾಗಿ ಪ್ರಾಸಗಳು ಹೊಳೆಯುತ್ತವೆ' ಎನ್ನುವರು. ಕವನದ ಮೊದಲ ಸಾಲೊ, ಕೊನೆಯ ಸಾಲೊ ಸಾಮಾನ್ಯವಾಗಿ ಅವರಿಗೆ ಮೊದಲು ಹೊಳೆಯುತ್ತಿತ್ತು. ಅದರ ಪರಿಧಿಯ ಸುತ್ತಮುತ್ತ ಆಲೋಚಿಸತೊಡಗಿದಾಗ ಇನ್ನಿತರ ಸಾಲುಗಳೂ ತಾವಾಗಿ ಹೊಳೆದು, ಸುಸಂಬದ್ಧವಾದ ಕವಿತೆಯೊಂದು ಸಹಜ ಕವಚ ಕುಂಡಲಗಳೊಡನೆ ಹುಟ್ಟುತ್ತಿತ್ತು. ಒಮ್ಮೊಮ್ಮೆ ಮೊದಲ ಸಾಲಾಗಿ ಹೊಳೆದದ್ದು ಕವನ ಮುಗಿದಾಗ ಕೊನೆಯ ಸಾಲಾಗಿ ರೂಪುಗೊಳ್ಳುತ್ತಿತ್ತು. ಆ ಕವನ ೧೪ ಸಾಲುಗಳ ಸಾನೆಟ್ ಆಗಬಹುದು, ೪೦-೬೦ ಸಾಲುಗಳ ಕಥನ ಕವನವಾಗಬಹುದು. ೧೦-೧೫ ಸ್ಟಾಂಜಾಗಳ ಚತುಷ್ಪದಿಯಾಗಬಹುದು; ಇಡೀ ಕವನ ಅವರ ಮನಸ್ಸಿನಲ್ಲಿ ಖಚಿತವಾಗಿ ಆಕೃತಿಗೊಂಡಿರುತ್ತಿತ್ತು. ತಮ್ಮ ಮನೋಭೂಮಿಕೆಯಲ್ಲಿ ಕವಿ ಅನುಚಿತವೆನಿಸಿದ ಪದಗಳನ್ನು ಹೊಡೆದು ಹಾಕಿ, ಅಳಿಸಿ, ಬದಲಾಯಿಸಿ ರುತ್ತಿದ್ದರು. ಸಹಜ ಪ್ರಾಸಗಳೊಂದಿಗೆ ಕಾಗದದ ಮೇಲೆ ಕವಿತೆ ಅವತರಿಸಲು ಸಿದ್ಧಗೊಂಡಿರುತ್ತಿತ್ತು. ಹೀಗಾಗಿ ಸಾಮಾನ್ಯವಾಗಿ ಹೇಳಿ ಬರೆಸಲಾಗದ ಸಾಮಗ್ರಿಯಾದ ಕವಿತೆಯನ್ನು ಕೂಡ ಕೆಎಸ್‌ನ ಸಮರ್ಥವಾಗಿ ಹೇಳಿ ಬರೆಸಬಲ್ಲವರಾಗಿದ್ದರು. ಸಾಮಾನ್ಯವಾಗಿ ನಾನು ಅವರಲ್ಲಿಗೆ ಹೋದಮೇಲೆ ಒಂದು ಅರ್ಧಗಂಟೆ ಕಾಲ ಅದೂ ಇದೂ ಲೋಕಾಭಿರಾಮವಾಗಿ ಮಾತನಾಡುತ್ತ ಕುಳಿತಿರುತ್ತಿದ್ದೆವು. ಅಷ್ಟು ಹೊತ್ತಿಗೆ ಶ್ರೀಮತಿ ವೆಂಕಮ್ಮನವರು ಕಾಫಿ ತಂದುಕೊಡುವರು. ಕಾಫಿ ಕುಡಿದಾದ ಬಳಿಕ ಹಾಗೆ ಮನಸ್ಸಿನಲ್ಲಿ ಪೂರ್ಣವಾಗಿ ರೂಪಿತವಾಗಿರುತ್ತಿದ್ದ ಕವನವನ್ನು ಹೇಳಿ ಬರೆಸಲು ತೊಡಗುತ್ತಿದ್ದರು. "ಬಹುಪಾಲು ಕವಿತೆಗಳು ಸುಮಾರು ಅರ್ಧಗಂಟೆ ಅವಧಿಯಲ್ಲಿ ಪ್ರತ್ಯೇಕ 'ಸಿಟಿಂಗ್'ನಲ್ಲಿ ಹೇಳಿ ಬರೆಸಿರುವಂಥವು. ಕೆಲವಂತೂ ಹತ್ತೇ ನಿಮಿಷದಲ್ಲಿ ಮುಗಿದಿವೆ. ಅಕ್ಲಿಷ್ಟ ಕರ್ಮಿಯಾದ ಕವಿಯ ಮನಸ್ಸಿನಲ್ಲಿ ಅಮೂರ್ತ ಸ್ಥಿತಿಯಲ್ಲಿದ್ದ ಚಿಂತನೆಯು ಅನುಭವದ ಕಾವಿನಲ್ಲಿ ಬೆಳಗಿ ಮೂರ್ತಸ್ವರೂಪವನ್ನು ಪಡೆದು ಉಚಿತ ಪದಗಳ ಶರೀರ ಶಿಲ್ಪವನ್ನು ತಳೆದು ಬರಹಕ್ಕಿಳಿಯುತ್ತಿದ್ದುದನ್ನು ಕಾಣುವಾಗ, ಅದನ್ನು ಬರೆದುಕೊಳ್ಳುವಾಗ ನಾನು ಸಂಭ್ರಮಿಸಿದ್ದೇನೆ. ಆ ಬಳಿಕ ಅವನ್ನು ಒಂದೆರಡು ಬಾರಿ ಓದಿಸಿ ಕೇಳಿ, ಉಚಿತವೆನಿಸಿದರೆ ಅಲ್ಲಲ್ಲಿ ಅಷ್ಟಿಷ್ಟು ತಿದ್ದುಪಡಿ ಮಾಡಿ, ಅಂತಿಮ ರೂಪವನ್ನು ಕವಿ ಕೊಟ್ಟಿದ್ದಾರೆ. ಅಂಥ ಸಂದರ್ಭದಲ್ಲಿ ನನಗೆ ತೋರಿದ ಕೆಲವು ಸಂದೇಹಗಳನ್ನೊ, ಅಂಶಗಳನ್ನೊ ವ್ಯಕ್ತಪಡಿಸಿದಂದು, ಮುಕ್ತ ಮನಸ್ಸಿನಿಂದ ಅವನ್ನು ಆಲಿಸಿ, ಕೆಲವೊಮ್ಮೆ ಒಪ್ಪಿ ಸ್ವೀಕರಿಸಿರುವುದೂ ಉಂಟು. ಕಿರಿಯನಾದ ನನಗೆ ಅದು ಸಮ್ಮಾನ ಭಾವವನ್ನು ತಂದಿತ್ತಿದೆಯೆಂದರೂ ತಪ್ಪಾಗದು.

ಬರೆಸಿದ ಕವಿತೆಯನ್ನು ಅವರಿಗೆ ನಿಧಾನವಾಗಿ ಓದಿ ಹೇಳುವ ಸಂದರ್ಭದಲ್ಲಿ ನನಗೆ 'Perfect poetic utterance' ಎನಿಸಿದ ಸಾಲುಗಳನ್ನೊ ಉತ್ತಮ ನುಡಿಗಟ್ಟನ್ನೊ ತುಂಬ ಸಹಜವಾಗಿ ಬಂದ ಪ್ರಾಸಗಳನ್ನೊ, ತಿರುವುಗಳನ್ನೊ ಮುಕ್ತಾಯವನ್ನೊ ಅಥವಾ ಉತ್ಕೃಷ್ಟವೆನಿಸಿದ ಇಡೀ ಕವಿತೆಯನ್ನೊ ಕುರಿತು ನನ್ನ ಅನಿಸಿಕೆಗಳನ್ನು ಸಂತೋಷಭಾವವನ್ನು ಅವರಲ್ಲಿ ನಿವೇದಿಸುತ್ತಿದ್ದೆ. ಅಂಥ ಸಂದರ್ಭಗಳಲ್ಲೆಲ್ಲ ಅವರು ತಕ್ಷಣದ ಪ್ರತಿಕ್ರಿಯೆ : 'ಎ.ಸೀ. ಇದ್ದಿದ್ರೆ ಎಷ್ಟು ಸಂತೋಷ ಪಡ್ತಾ ಇದ್ದರೋ!' 'ಎ.ಸೀ. ಇದ್ದಿದ್ರೆ ಭೇಷ್ ಎಂದು ಬೆನ್ನು ತಟ್ತಾ ಇದ್ರು! ಎಲ್ಲಿ ತರೋಣ ಅಂಥವರನ್ನು?'ಅಥವಾ, ತಮ್ಮ ಒಂದು ಕವಿತಾಭಾಗ ಅಥವಾ ಪಂಕ್ತಿ ತಮಗೇ ತೃಪ್ತಿಯನ್ನು ತಂದುಕೊಟ್ಟಿದೆಯೆನ್ನಿಸಿದಾಗ, 'enjoying the beauty of his own poetic creation or phrase used, 'ಓಹ್' ಎಂದಷ್ಟೆ ಉದ್ಗರಿಸಿ ತುಟಿಯಂಚಿನಲ್ಲಿ ಕಿರುನಗೆಯೊಂದನ್ನು ಸುಳಿಸಿ 'I am happy at it' ಎನ್ನುತ್ತಿದ್ದರು. ಅವರ ಹಸನ್ಮುಖ ಅವರ ಸಂತೋಷವನ್ನು ಪ್ರತಿಫಲಿಸುತ್ತಿತ್ತು.

ಕೆಲವೊಮ್ಮೆ ವಾರಗಟ್ಟಲೆ, ತಿಂಗಳುಗಟ್ಟಲೆ ಒಂದು ಪದ್ಯವನ್ನೂ ಹೇಳಿ ಬರೆಸಲಾಗುತ್ತಿರಲಿಲ್ಲ. 'ಏನೂ ಹೊಳೀತಾನೇ ಇಲ್ಲಪ್ಪ, ಯೋಚಿಸ್ತಾ ಇದ್ದೀನಿ' ಎನ್ನುವರು. ಅಷ್ಟೆ ಇಂಥ 'period of hibernation'

ಕಳೆದು, ಮಾನಸಿಕವಾಗಿ ಅವರ ಪೂರ್ವಸಿದ್ಧತೆ ಮುಗಿದಿದ್ದರೂ – ದಿನಕ್ಕೆ, ಎರಡು ದಿನಕ್ಕೆ ಒಂದರಂತೆ, ಒಂದೆರಡು ತಿಂಗಳುದ್ದಕ್ಕೂ ಹೇಳಿ ಬರೆಸುತ್ತಿದ್ದರು. ನಾಲ್ಕಾರು ಸಲ ದಿನಕ್ಕೆ ಎರಡೆರಡು ಕವನಗಳನ್ನು ಹೇಳಿ ಬರೆಸಿರುವುದೂ ಉಂಟು. ಸಾಮಾನ್ಯವಾಗಿ ದಿನಕ್ಕೊಮ್ಮೆಯಾದರೂ ಅವರಿಂದ ದೂರವಾಣಿ ಕರೆ ಇರುತ್ತಿತ್ತು. ಹಲವು ಸಲ ರಾತ್ರಿ ಹತ್ತು ಗಂಟೆಗೊ, ಬೆಳಿಗ್ಗೆ ಏಳು ಗಂಟೆಗೊ ಪುನಃ ಅನಿರೀಕ್ಷಿತ ಕರೆ ಬರುತ್ತಿತ್ತು. 'ಕುಮಾರ್', I have conceived a poem on Time. You will like it.' ಭವಿಷ್ಯದ ಬಗ್ಗೆ Hope ಇದೆ, ಭರವಸೆ ಇದೆ; bright ಆಗಿರುತ್ತೆ. ಬೆಳಿಗ್ಗೆ ಬಂದುಬಿಡಿ 'I will dictate it' ಎನ್ನುವರು. ಮತ್ತೊಮ್ಮೆ 'ಇವೊತ್ತು ಮಾತಾಡ್ತಿದ್ದೆವಲ್ಲ; ನಾಳೆ Death ಬಗ್ಗೆ ಪದ್ಯ Dictate ಮಾಡ್ತೀನಿ. ಅದು ಇನ್ನೂ complicate ಆಗಿರ್ತೆ' ಎನ್ನುವರು. ಮಗದೊಮ್ಮೆ 'I have composed a beautiful song, Kumar, after Burns agin. ನಾಳೆ ಬರ್ತೀರಿ ತಾನೇ?' ಎನ್ನುವರು ವಿಶೇಷವಾದ್ದು ಏನನ್ನೋ ನನಗೆ ಆ ಕ್ಷಣವೇ ತಿಳಿಸಿಬಿಡಬೇಕೆನ್ನುವ ಸಂಭ್ರಮ, thrill ಇರುತ್ತಿತ್ತು ಅವರ ಧ್ವನಿಯಲ್ಲಿ, ಆ ವಯಸ್ಸಿನಲ್ಲಿಯೂ. ಅದನ್ನು ಕೇಳಿ ನನಗೂ ರೋಮಾಂಚನವಾಗುತ್ತಿತ್ತು. ಮಾರನೆಯ ದಿನ ಆ ಪದ್ಯವನ್ನುವರು ಹೇಳಿ ಬರೆಸುವವರೆಗೂ ನನ್ನ ಕುತೂಹಲ, ನಿರೀಕ್ಷೆಗಳು ತಣಿಯುತ್ತಿರಲಿಲ್ಲ. ಅದನ್ನು ಬರೆದುಕೊಂಡಾದ ಮೇಲೆ ಆ ಕವಿತೆಯನ್ನು ಆಸ್ವಾದಿಸಿದ ಮೇಲೆ, ಆ ಬಗೆಗೆ ಅವರೊಂದಿಗೆ ಚರ್ಚಿಸಿ ಸಂತೋಷವನ್ನು ಹಂಚಿಕೊಂಡ ಮೇಲೇ ಮನಸ್ಸು ಸಮಾಧಾನಗೊಳ್ಳುತ್ತಿತ್ತು. ಅವರ 'ಬಾಳು-ಸಾವು', 'ಬಾಳ ಹಾದಿ', 'ಕಿರಿಯ ಕವಿಗೆ – ೧, ೨', 'ನಾ ಕಂಡ ದೇವರು' 'ಪಯಣ', 'ಕವಿತೆಯಾಯಿತು ಮಾತು', 'ಕೆಲವು ಅನುಭವ ಹೀಗೆ', 'ಕನ್ನಡಿ', 'ನೀನೇ ನಾನು' ಇತ್ಯಾದಿ ಇನ್ನೂ ಕೆಲವು ಕವನಗಳನ್ನು ಬರೆದುಕೊಳ್ಳುವಾಗ ನನಗಾದ ಸಂತೋಷ, ಸಂಭ್ರಮ ಅನಿರ್ವಚನೀಯ. ವಿ.ಸೀ. ಅವರನ್ನು ಕುರಿತು ೩-೪ ಕವನಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಅವರು ಹೇಳಿ ಬರೆಸಿರುವುದುಂಟು. ಅಲ್ಲಿ ಅವರು ವ್ಯಕ್ತಪಡಿಸಿರುವ ಹೃದ್ಯವಾದ ಭಾವನೆಗಳು – ಆಪ್ತತೆ, ಸೌಹಾರ್ದತೆ, ಕೃತಜ್ಞತೆಗಳು – ಅನನ್ಯವಾದ್ದು. ಮನುಷ್ಯ ಸಂಬಂಧಗಳಲ್ಲಿ ಕೃತಜ್ಞತೆ ಎನ್ನುವುದೇ ವಿರಳವಾಗುತ್ತಿರುವ ಇಂದಿನ ಸಂದರ್ಭದಲ್ಲಿ ಕವಿ ಎಷ್ಟು ಪ್ರಾಮಾಣಿಕತೆಯಿಂದ, ಯಾವ ಮುಚ್ಚುಮರೆಯೂ ಇಲ್ಲದೆ ತಮ್ಮ ಭಾವನೆಗಳನ್ನು ಅಲ್ಲಿ ಹೊರಹೊಮ್ಮಿಸಿದ್ದಾರೆ ಹಾಗೂ ಎಷ್ಟು ಎತ್ತರದಲ್ಲಿ ವಿ.ಸೀ. ಅವರನ್ನು ಇಟ್ಟಿದ್ದಾರೆ ಎಂಬುವನ್ನು ಆಯಾ ಕವನಗಳನು ಓದಿಯೇ ಅರಿಯಬೇಕು.

ಇವನ್ನು ಬರೆಸುತ್ತಿದ್ದಾಗ ಅವರ ಕಂಠ ಗದ್ಗದಗೊಂಡದ್ದುಂಟು. ವಿ.ಸೀ. ಅವರನ್ನೂ ಅಷ್ಟೇ ಹತ್ತಿರದಿಂದ ಕಂಡು, ವಿ.ಸೀ. – ಕೆಎಸ್‌ನ ಸಂಬಂಧದ ಆಪ್ತತೆಯನ್ನು ಅರಿತವನಾದ್ದರಿಂದ ನನ್ನ ಕಣ್ಣೂ ತೇವಗೊಂಡದ್ದುಂಟು. ವಿ.ಸೀ. ತೀರಿಕೊಂಡ ತರುವಾಯ ಕೆಎಸ್‌ನ ಲಾಲ್‌ಬಾಗಿಗೆ ಕಾಲೇ ಇಡಲಿಲ್ಲ! ಬರ್ನ್ಸ್ ಅನುವಾದದ ಬಿಡುಗಡೆಯನ್ನು ಎಂಟಿಆರ್‌ನಲ್ಲಿ ಆಯೋಜಿಸಿದ್ದರಿಂದ, ನನ್ನ ಬಲವಂತಕ್ಕೆ ಆ ಸಂಜೆ ಎಂ.ಟಿ.ಆರ್.ಗೆ. ಅವರು ಬಂದರೆ ವಿನಾ, ವಿ.ಸೀ. ತೀರಿಕೊಂಡ ಬಳಿಕ ಅಲ್ಲಿಗೂ ಅವರು ಹೋಗಿರಲಿಲ್ಲ. ಈ ಸಣ್ಣ ಸಂಗತಿಗಳಿಂದಲೂ ಅವರ ಸೂಕ್ಷ್ಮ ಮನೋಧರ್ಮದ ಅರಿವಾಗುತ್ತದೆ. ಆ ಎರಡು ಜಾಗಗಳಿಗೆ ಹೋದರೆ ವಿ.ಸೀ., ಪೋಟಗಾನಹಳ್ಳಿ ಅವರೊಡನೆ ತಾವು ಕಳೆದ ಮಧುರ ಕ್ಷಣಗಳ ನೆನಪುಕ್ಕಿ, ತಮ್ಮ ಅಂತಃಕರಣ ಕಲಕುತ್ತದೆಂದೂ ಆ ಇಬ್ಬರಿಲ್ಲದಿರುವ ಈಗ ಆ ಜಾಗಗಳಿಗೆ ಹೋಗಲು ಮನಸ್ಸಾಗುವುದಿಲ್ಲವೆಂದೂ ಆ ಕಾರಣ ಅಲ್ಲಿಗೆ ಹೋಗುವುದೇ ಬೇಡವೆಂದೂ ಅವರು ನಿರ್ಧರಿಸಿದ್ದರು... ತೀನಂಶ್ರೀ ಅವರನ್ನು ಕುರಿತು ಬರೆಸಿದಾಗಲೂ ಅಂಥುದೇ ಅನುಭವವಾಯಿತು.

ಒಂದೆರಡು ವಿಶೇಷ ಸಂದರ್ಭಗಳನ್ನು ಇಲ್ಲಿಯೇ ಸ್ಮರಿಸಬೇಕು. ಒಂದೆರಡು ಗೀತಗಳನ್ನು – ಅಂದಹಾಗೆ, ಕೆಎಸ್‌ನ ಕವನಗಳೂ (poems) ಗೀತಗಳೂ (songs) ಬೇರೆ ಬೇರೆ ಎಂದೇ ವಿಂಗಡಿಸಿದ್ದರು

– 'ಸರೋಜ' 'ಪಾರ್ವತಿ' – ಹೇಳಿ ಬರೆಸಿದ ಸಂದರ್ಭ. ಸಾಮಾನ್ಯವಾಗಿ ಒಂದು ಸಲ ಹೇಳಿ ಬರೆಸಿದ ಮೇಲೆ ಅವರು ಹೆಚ್ಚು ತಿದ್ದುಪಡಿ ಮಾಡುವವರಲ್ಲ; ಅಲ್ಲಲ್ಲಿ 'touch-up' ಮಾಡುವುದನ್ನು ಹೊರತುಪಡಿಸಿದರೆ. ಅವರ ಆ ಸ್ವಭಾವಕ್ಕೆ ವಿರುದ್ಧವಾಗಿ, ಆದರೆ ಅಪವಾದವೆಂಬಂತೆ, ಈ ಎರಡು ಗೀತಗಳನ್ನೂ, ನಾಲ್ಕಾರು ಸಲ ಹೊಸದಾಗಿಯು ಹೇಳಿ ಬರೆಸಿದರು. ವಾರವಿಡೀ ಆ ಗೀತಗಳ ಬಗೆಗೇ ಚಿಂತಿಸುತ್ತಿದ್ದರು. ಪದೌಚಿತ್ಯ, ಪದಲಾಲಿತ್ಯ, ಪ್ರಾಸ, ಅಡಕ, ಅಲ್ಲಿನ action ಇವುಗಳ ಬಗೆಗೆ ಮತ್ತೆ ಮತ್ತೆ ವಿಶ್ಲೇಷಿಸಿ ಪರಿಷ್ಕರಿಸುತ್ತಿದ್ದರು. ಒಂದೊಂದು ಸಲ ಹೊಸದಾಗಿ ಹೇಳಿ ಬರೆಸಿದಾಗಲೂ ಒಂದೆರಡು ಸಾಲೊ stanzaವೊ merge ಆಗಿರುತ್ತಿತ್ತು; ಆದರೂ ಅವರಿಗೆ ಸಂಪೂರ್ಣ ತೃಪ್ತಿ ಕೊಟ್ಟಂತಿರಲಿಲ್ಲವಾಗಿ ಏಳೆಂಟು ದಿನ ಸತತವಾಗಿ ಅವನ್ನು ಪರಿಷ್ಕರಿಸುತ್ತಲೇ ಇದ್ದರು. ಆ ಸಂದರ್ಭದಲ್ಲೇ ಅವರು ನುಡಿದದ್ದು : 'song ಬರೆಯೋದು ಕಷ್ಟ ಪದ್ಯ ಹಾಗೂ ಹೀಗೂ ಇದ್ರೆ ತೊಂದರೆ ಇಲ್ಲ. ಆದರೆ song ಹಾಗಲ್ಲ. ಅಲ್ಲಿ ಪ್ರತಿಯೊಂದು ಅಕ್ಷರಕ್ಕೂ ಪದಕ್ಕೂ significance ಇರುತ್ತೆ. meaning ಇರುತ್ತೆ.' ಅಂಥದೇ ಇನ್ನೊಂದು ಸಂದರ್ಭದಲ್ಲಿ ಅವರು 'song'ಗೆ ಬಂದಾಗ ಕವಿಯ ಪ್ರತಿಭೆ ಉಜ್ವಲವಾಗುತ್ತೆ. song crisp ಆಗಿರಬೇಕು; ಹೆಚ್ಚು ಮಾತಿರಬಾರದು. ಪದಲಾಲಿತ್ಯವಿರಬೇಕು. stanza to stanza action ಇರಬೇಕು' ಎಂದರು. ಬಹು ಹಿಂದೆ 'ಹತ್ತು ವರ್ಷದ ಹಿಂದೆ ಮುತ್ತೂರ ತೇರಿನಲಿ/ಅತ್ತಿತ್ತ ಸುಳಿದವರು ನೀವಲ್ಲವೆ?' ಎಂದು ಆರಂಭವಾಗುವ 'ನೀವಲ್ಲವೆ?' ಎಂಬ ಗೀತವನ್ನು ಬರೆದಾಗಲೂ ಅವರಿಗೆ ಇದೇ ಬಗೆಯ ಅನುಭವವಾಗಿತ್ತಂತೆ; ಏಳೆಂಟು ಸಲ ಹೊಸತಾಗಿ ಬರೆದ ಮೇಲೆ ತೃಪ್ತಿಕೊಟ್ಟಿತಂತೆ. ಈಗಲೂ ಅವರ ಮನಸ್ಸಿಗೆ ಸಮಾಧಾನ ದೊರೆತ ಮೇಲೇ ಆ ಎರಡು ಗೀತಗಳನ್ನೂ ಅವರು ಇಟ್ಟುಕೊಂಡದ್ದು. ಇದೇ ರೀತಿ ಅವರು ಬರೆಸಿದ ಹಲವು ಕವನಗಳನ್ನು ಸಂಗ್ರಹವಾಗಿ ಸಂಕಲಿಸಿ ಪ್ರಕಟಿಸುವ ಹೊತ್ತಿನಲ್ಲಿಯೂ 'I think we can drop this piece' ಎಂದು ಬಿಟ್ಟಿದ್ದುಂಟು. ಪತ್ರಿಕೆಗಳಲ್ಲಿ ಅಚ್ಚಾಗಿದ್ದ ಕೆಲವೂ ಹಾಗೆ ಕೈಬಿಟ್ಟುದರಲ್ಲಿ ಸೇರಿವೆ. ಸಾಮಾನ್ಯವಾಗಿ ಹೇಳಿ ಬರೆಸಿದ ಮೇಲೆ ಐದಾರು ತಿಂಗಳು ಆ ಕವಿತೆಗಳನ್ನು ಅವರು ಪುನಃ ಓದಿಸಿ ಕೇಳುತ್ತಿರಲಿಲ್ಲ. ಆ ಬಳಿಕ ಓದಿಸಿದಾಗ, ಕವನ ಒಟ್ಟಾರೆ ಅವರ ಮನಸ್ಸಿಗೆ ತೃಪ್ತಿ, ಸಮಾಧಾನ ತಂದರೆ ಮಾತ್ರ ಅವನ್ನು ಉಳಿಸಿಕೊಳ್ಳುತ್ತಿದ್ದರು; ಇಲ್ಲವಾದರೆ 'ಹರಿದುಹಾಕಿಬಿಡಿ' ಎನ್ನುತ್ತಿದ್ದರು. (ಈ ಆದೇಶವನ್ನು ಮಾತ್ರ ನಾನು ಅಷ್ಟು ನಿಷ್ಠೆಯಿಂದ ಪಾಲಿಸಲಿಲ್ಲ; ಅವರ ಆತ್ಮ ನನ್ನನ್ನು ಕ್ಷಮಿಸಲಿ!) ಅವರೇ ಕುಳಿತು ಕವನ ಬರೆಯುತ್ತಿದ್ದಾಗಲೂ ಇದೇ ಪದ್ಧತಿಯನ್ನು ಅನುಸರಿಸುತ್ತಿದ್ದರಂತೆ.

ಇನ್ನೊಂದು ಸಂದರ್ಭ: ಕೆ.ಎಸ್.ನ ಮನೆಯಪಕ್ಕ ಒಂದು ಖಾಲಿ ನಿವೇಶನವಿತ್ತು. ೧೦-೧೫ ವರ್ಷಗಳಿಂದ ಅಲ್ಲಿ ಕಟ್ಟಡ ಎದ್ದಿರಲಿಲ್ಲ. ಹೊಸದಾಗಿ ಅದನ್ನು ಖರೀದಿಸಿದವರು ಅಲ್ಲಿ ಎರಡು ಅಂತಸ್ತಿನ ಭಾರಿ ಕಟ್ಟಡ ಕಟ್ಟಲು ಪ್ರಾರಂಭಿಸಿದರು. ಕಟ್ಟಡ ನಿರ್ಮಾಣವೆಂದ ಮೇಲೆ ಇಟ್ಟಿಗೆ, ಮರಳು, ಸಿಮೆಂಟ್ ಇತ್ಯಾದಿಗಳ ಧೂಳು ಸರ್ವೇಸಾಮಾನ್ಯ. ಹಾಗೇ ಪದಾರ್ಥಗಳನ್ನು ಎತ್ತು ಇಳಿಸು ಕಟ್ಟುಕುಟ್ಟು ಚಚ್ಚು ಇತ್ಯಾದಿಯಿಂದ ಉಂಟಾಗುವ ಶಬ್ದ. ಬೇಗ ಗೋಡೆಗಳೆದ್ದವು; ತಾರಸಿಯನ್ನೂ ಹಾಕಿದರು. ಆ ಬಳಿಕ ಪ್ರಾರಂಭವಾಯಿತು ನೆಲಕ್ಕೆ, ಗೋಡೆಗೆ ಅಮೃತಶಿಲೆಯ ಚೌಕಗಳನ್ನು ಹಾಸುವಿಕೆ, ಹೊದಿಸುವಿಕೆ. ಪೂರ್ವಭಾವಿಯಾಗಿ ಅಳತೆಗೆ ತಕ್ಕಂತೆ ಆ ಅಮೃತಶಿಲೆಯನ್ನು ಕತ್ತರಿಸುವ ಕೆಲಸಕ್ಕೆ ತೊಡಗಿದರು. ಬೆಳಿಗ್ಗೆ ೮ ರಿಂದ ರಾತ್ರಿ ೮ರ ವರೆಗೆ ಎದ್ದುತ್ತಿರುವಾಗೆಲ್ಲ ಶಿಲೆಯನ್ನು ಕತ್ತರಿಸಿ ಪಾಲಿಷ್ ಮಾಡುತ್ತಿದ್ದರು. ಅದರಿಂದ ಉತ್ಪನ್ನವಾಗುತ್ತಿದ್ದ ಕರ್ಕಶ ಶಬ್ದದಿಂದ ಉಂಟಾಗುತ್ತಿದ್ದ disturbance ಅವರ್ಣನೀಯ, ಅಸಹನೀಯ. ಮನೆಯ ಕಿಟಕಿ, ಬಾಗಿಲು ಎಲ್ಲವನ್ನೂ ಮುಚ್ಚಿ ಮುಸುಕು ಹಾಕಿ ಮಲಗಿದರೂ ಬಿಡದೆ ಕಿವಿಯನ್ನು ಅಪ್ಪಳಿಸಿ ಗಡಚಿಕ್ಕುವ, ತಲೆ ದಿಮ್ಮೆನ್ನಿಸುವ, ಅತೀವ ಮಾನಸಿಕ ಯಾತನೆಯನ್ನು ಉಂಟುಮಾಡುವ ಶಬ್ದ

ಅದು. ಕೇವಲ ೧೫-೨೦ ಅಡಿ ಅಂತರದಲ್ಲಿ ಹಗಲಿಡೀ ಕುಳಿತಿರುತ್ತಿದ್ದ, ಮಲ್ಲಿಗೆಯಷ್ಟು ನವುರಾದ ಮೃದುವಾದ ಮನೋಧರ್ಮದ, ಅತ್ಯುತ್ತಮ ಸಂಗೀತವನ್ನು ಕೇಳಿ ಆನಂದಿಸಿದ್ದ, ೯೦ನ್ನು ಸಮೀಪಿಸುತ್ತಿದ್ದ ವಯೋವೃದ್ಧ ಕವಿ ಕೆಎಸ್‌ನ ಅದು ಹೇಗೆ ಐದಾರು ತಿಂಗಳ ಕಾಲ ಆ ಕರ್ಕಶ ಶಬ್ದವನ್ನು, ಆ ಶಬ್ದದಿಂದ ಉಂಟಾಗುತ್ತಿದ್ದ ದೈಹಿಕ, ಮಾನಸಿಕ ಯಾತನೆಯನ್ನು ಸಹಿಸಿಕೊಂಡರೋ– ಇಂದಿಗೂ ನನಗೆ ಅರ್ಥವಾಗುತ್ತಿಲ್ಲ! ಅವರೊಡನೆ ಒಂದೆರಡು ಗಂಟೆಗಳ ಕಾಲ ಅಲ್ಲಿ ಕುಳಿತಿರುತ್ತಿದ್ದ ನನಗೇ – ಎಂದರೆ, ವಯಸ್ಸಿನಲ್ಲಿ ಕಿರಿಯನಾಗಿದ್ದವನಿಗೇ– ಅದನ್ನು ತಾಳಿಕೊಳ್ಳುವುದು ಅಶಕ್ಯವಾಗುತ್ತಿತ್ತು. ಎಂದ ಮೇಲೆ, ಆ ಬಗ್ಗೆ ಹೆಚ್ಚು ಹೇಳಬೇಕಾದ ಅಗತ್ಯವಿಲ್ಲ. ಅದನ್ನು ಸಹಿಸಿಕೊಳ್ಳಲೇಬೇಕಾಗಿರುವ ಅನಿವಾರ್ಯತೆಯನ್ನೂ ತಮ್ಮ ಅಸಹಾಯಕತೆಯನ್ನೂ ನನ್ನ ಮುಂದೆ ಆಗೀಗ ಹೇಳಿಕೊಂಡರೂ ಅವರ ವಿರುದ್ಧ ಅವರು ಒಂದು ದಿನವೂ ದನಿಯೆತ್ತದಿದ್ದುದು, 'ಏನೋ ಮುಗಿಸಿಕೊಂಡು ಹೋಗಲಿ ಬಿಡಿ' ಎಂದು ಪ್ರತಿಭಟಿಸಲಿ ಚಿಟ್ಟಿಸಿದವರಿಗೇ ಸಮಾಧಾನ ಹೇಳಿದ್ದು ಅವರ ಸಹನೆ, ಸಹಿಷ್ಣುತೆಗಳ ಪರಮಾವಧಿ ಮಟ್ಟವೆನ್ನಿಸಿತು. ಅದಕ್ಕಿಂತ ಹೆಚ್ಚಾಗಿ ಆ ಐದಾರು ತಿಂಗಳಲ್ಲಿ, ಆ ಕರ್ಕಶ ಶಬ್ದದ ನಡುವೆಯೂ ತಮ್ಮ ಕಾವ್ಯ ಚಿಂತನವ್ಯಾಪಾರವನ್ನು, ತಮ್ಮ ಸೃಜನಶೀಲ ಮನೋಧರ್ಮವನ್ನು ಸುರಕ್ಷಿತವಾಗಿ ಕಾಯ್ದುಕೊಂಡಿದ್ದರು ಮಾತ್ರವಲ್ಲ, 'ಎದೆ ತುಂಬ ನಕ್ಷತ್ರ' ಸಂಕಲನದಲ್ಲಿ ಸಂಗ್ರಹಗೊಂಡಿರುವ ಬಹುಪಾಲು ಕವನಗಳನ್ನು ಆ ಕರ್ಕಶ ಶಬ್ದದ ನಡುವೆಯೇ ಅವರು ಆಲೋಚಿಸಿ ಹೇಳಿ ಬರೆಸಿದ್ದು ಅಂದು ಹೇಗೋ ಇಂದಿಗೂ ನನಗೆ ವಿಸ್ಮಯವೆನ್ನಿಸುತ್ತದೆ. ಅವರ ಸಹನೆ-ಸಹಿಷ್ಣುತೆಗೆ, ಅವರ ಅದ್ಭುತ ಸೃಜನಶೀಲ ಸಾಮರ್ಥ್ಯಕ್ಕೆ ಮೌನವಾಗಿ ಮಣಿಯಬೇಕೆನ್ನಿಸುತ್ತದೆ.

೩

'ಮಾತು ಜ್ಯೋತಿರ್ಲಿಂಗವಾಗಿ ಹೊಳೆಯಿತು ನನಗೆ,
ಕವಿತೆಯಾಯಿತು ನನಗೆ ನನ್ನ ಮಾತು.'

('ಕವಿತೆಯಾಯಿತು ಮಾತು', ದೀಪ ಸಾಲಿನ ನಡುವೆ, ಕೆಎಸ್‌ನ)

'ನುಡಿಯನ್ನು ನಾಜೂಕಾಗಿ ಬಳಸುತ್ತ', ತಮ್ಮ 'ಪಾಲಿಗೆ ಬಂದ ಅದನಿದನು ಹಾಡುತ್ತ', 'ಯಾರಿಗೂ ನೋವಾಗದಂತೆ' ಬದುಕಿದ್ದ ಕೆಎಸ್‌ನ ೨೦೦೩ರ ಜುಲೈ ಅಂತ್ಯದಲ್ಲೊಂದು ರಾತ್ರಿ ಆಕಸ್ಮಿಕಕ್ಕೆ ಒಳಗಾದರು. ನಾಲ್ಕೇ ದಿನ ಮುಂಚೆ ಕುವೆಂಪು ಅವರ ಮೇಲಿನ ತಮ್ಮ ಗೌರವಾದರ ದ್ಯೋತಕವಾಗಿ 'ಕುವೆಂಪು ವಿಶ್ವವಿದ್ಯಾನಿಲಯ ಗೀತೆ'ಯನ್ನು ಹೇಳಿ ಬರೆಸಿದ್ದರು. ಆ ವಿಶ್ವವಿದ್ಯಾನಿಲಯದ ಕುಲಪತಿಗಳ ಮನವಿಯ ಮೇರೆಗೆ. ಅಭ್ಯಾಸಬಲದಿಂದ ರಾತ್ರಿ ಒಳಕೋಣೆಗೆ ಹೋಗಿ ದೀಪ ಹಾಕಲು ಸ್ವಿಚ್ ಹುಡುಕಿದರು. ಕತ್ತಲೆಯಲ್ಲಿ ಅದು ಅವರಿಗೆ ಸಿಗದಿದ್ದುದರಿಂದ ಮಂಚದ ಮೇಲೆ ಕುಳಿತುಕೊಳ್ಳಹೋದರು. ಮಂಚವಿದೆಯೆಂದುಕೊಂಡಿದ್ದ ಜಾಗದಲ್ಲಿ ಅದಿಲ್ಲದೆ ನೆಲಕ್ಕೆ ಕುಸಿದು ಕುಕ್ಕರಿಸಿದರು. ಅದದ್ದಿಷ್ಟೆ. ಅವರೆ ಹಾಗೆ ಕುಳಿತ ರಭಸಕ್ಕೆ ಹಾಗೂ ತಮ್ಮದೇ ದೇಹದ ಭಾರಕ್ಕೆ ಅವರ ಸೊಂಟದ ಮೂಳೆ ಮುರಿದು, ರಾತ್ರಿ ಹೇಗೆ ಕಳೆದರೋ! ಬೆಳಿಗ್ಗೆ ಅವರಿಗೆ ಸುತರಾಂ ಕದಲಲೂ ಆಗದಷ್ಟು ನೋವು ಕಾಣಿಸಿಕೊಂಡಿತು. ನಾಲ್ಕೈದು ದಿನಗಳಾದ ಮೇಲೆ ಇಷ್ಟವಿಲ್ಲದಿದ್ದರೂ ಆಸ್ಪತ್ರೆ ಸೇರಬೇಕಾದ್ದು ಅನಿವಾರ್ಯವಾಯಿತು. ಪ್ರೊ. ಮೂರ್ತಿರಾಯರಿಗೆ ಶಸ್ತ್ರಚಿಕಿತ್ಸೆಯಾಗಿದ್ದ ಖಾಸಗಿ ನರ್ಸಿಂಗ್ ಹೋಮಿಗೆ ವರ್ಗಾವಣೆಯಾಗಿ, ಒಂದು ವರ್ಷ ಹಿಂದೆ ಅಲ್ಲಿ ಅವರಿದ್ದ ಕೋಣೆಗೆ ಎದುರಿನ ಕೋಣೆಯಲ್ಲೇ ಇವರಿರಬೇಕಾಯಿತು.

ಜೊತೆಯಲ್ಲಿ ಅಕ್ಕಿಹೆಬ್ಬಾಳಿಗೆ ಹೋಗಿದ್ದುದನ್ನು, ಆ ಬಳಿಕ ಒಂದೆರಡು ಸನ್ಮಾನ ಸಮಾರಂಭಗಳಲ್ಲಿ ವೇದಿಕೆಯ ಮೇಲೆ ಜೊತೆಯಲ್ಲಿ ಇದ್ದುದನ್ನು ನೆನಪಿಸಿಕೊಂಡ ಮೂರ್ತಿರಾಯರು, 'ಏನಪ್ಪ ಇಲ್ಲಿಯೂ ನಾವು ಜೊತೆಯಾದೆವೆ?' ಎಂದರು. ಇವರಿಗೂ ಶಸ್ತ್ರಚಿಕಿತ್ಸೆಯಾಯಿತು. ಇವೆಲ್ಲವನ್ನೂ ಆಕಸ್ಮಿಕವೆನ್ನುವುದೆ? ಅಥವಾ ಕೊನೆಗಾಲ ಸನ್ನಿಹಿತವಾಗುತ್ತಿರುವುದಕ್ಕೆ ಇದೊಂದು ನೆಪವಮಾತ್ರವಾಗಿ ಮುನ್ಸೂಚನೆ ಕೊಟ್ಟಿತೆನ್ನುವುದೆ? ಯಾರಿಗೆ ಏನೇ ಅನ್ನಿಸಲಿ ಬಿಡಲಿ, ಕೆಎಸ್‌ನರ ಮನಸ್ಸಿಗಂತೂ ಆ ಭಾವನೆ ಬಂದುಬಿಟ್ಟಿತ್ತು. ಮೂಳೆ ಮುರಿದುಕೊಂಡ ಮಾರನೆಯ ಬೆಳಿಗ್ಗೆ ಅವರನ್ನು ಕಾಣಲು ಹೋಗಿದ್ದಾಗ ಅವರು ನನ್ನೊಂದಿಗೆ ಮೊದಲು ನುಡಿದದ್ದು ಅದೇ ಮಾತು, 'I think I am coming to an end, K.' ಶಸ್ತ್ರಚಿಕಿತ್ಸೆ ಪಡೆದ ನರ್ಸಿಂಗ್ ಹೋಮಿನಲ್ಲೂ ಇದನ್ನೇ ಪುನರುಚ್ಚರಿಸಿದರು. ದುರದೃಷ್ಟವಶಾತ್ ಅಲ್ಲಿ ಅವರ ಮನಸ್ಸನ್ನು ಕಲಕುವಂಥ ವೈಯಕ್ತಿಕ ಕಹಿಘಟನೆ ಕೆಲವು ನಡೆದು, ತುಂಬಾ ನೊಂದು ಜುಗುಪ್ಸೆಗೊಂಡ ಅವರು ತಮ್ಮ ಜೀವನೋತ್ಸಾಹವನ್ನು ಕಳೆದುಕೊಂಡರು. ಮೂರು ವಾರ ಅಲ್ಲಿದ್ದು ಮನೆಗೆ ಹಿಂದಿರುಗಿದರು. ಆದರೆ ಆನಂತರ ಒಂದೆರಡು ತಿಂಗಳೇ ಉರುಳಿದರೂ ಅವರಿಗೆ ಹೆಜ್ಜೆಯನ್ನು ಊರಲೂ ಧೈರ್ಯವಾಗುತ್ತಿರಲಿಲ್ಲ. ದಿನೇದಿನೇ ತುಂಬಾ ನಿತ್ರಾಣರಾಗುತ್ತಿದ್ದರು. 'ವಾಟರ್ ಬೆಡ್' ಮೇಲೆ ಮಲಗಿದ್ದಲ್ಲೇ ಮಲಗಿರಬೇಕಿತ್ತು. ಸ್ವಲ್ಪ ಹೊತ್ತು ಒರಗಿ ಕುಳಿತುಕೊಳ್ಳಲೂ ತುಂಬಾ ಪ್ರಯಾಸ ಪಡಬೇಕಾಗುತ್ತಿತ್ತು. ಹೆಚ್ಚು ಶ್ರಮವಾಗುತ್ತಿತ್ತು. ಎಲ್ಲಕ್ಕೂ ಪರಾವಲಂಬನೆ ಅನಿವಾರ್ಯವಾಗಿದ್ದರೂ ಅವರ ಮನಸ್ಸಿಗೆ ಹಿತಕರವಾಗಿರಲಿಲ್ಲ. ಅವರು ಪಡುತ್ತಿದ್ದ ಕಷ್ಟ, ಅನುಭವಿಸುತ್ತಿದ್ದ ಯಾತನೆಯನ್ನು ನೋಡಲಾಗುತ್ತಿರಲಿಲ್ಲ. ಅಂಥ ಸನ್ನಿವೇಶದಲ್ಲಿಯೂ ಧೃತಿಗೆಡದೆ ಕವಿ ಪತ್ನಿ ವೆಂಕಮ್ಮನವರು ಮೈಯೆಲ್ಲಾ ಕಣ್ಣಾಗಿ ಅವರನ್ನು ನೋಡಿಕೊಂಡಂತೆಯೇ ಅವರ ಮನೆಯ ಹತ್ತಿರದಲ್ಲಿದ್ದ ಗೆಳೆಯ ಶ್ರೀತಾಂಡವೇಶ್ವರರು ಸಲ್ಲಿಸಿದ ಸೇವೆಯನ್ನೂ ಕೃತಜ್ಞತೆಯಿಂದ ಸ್ಮರಿಸಬೇಕು.

ಸೆಪ್ಟೆಂಬರ್ ಮೊದಲ ಭಾನುವಾರ. ಬೆಳಿಗ್ಗೆ (ಹಿಂದೆ ಮಾಸ್ಕೋದಲ್ಲಿದ್ದು ಈಗ ಬೆಂಗಳೂರಿನಲ್ಲಿ ನೆಲೆಸಿರುವ ) ಸ್ನೇಹಿತರು ಕೆ.ಎಲ್. ಗೋಪಾಲಕೃಷ್ಣರಾವ್ ದಂಪತಿಗಳು ಅವರನ್ನು ಕಾಣಲು ಬಂದಿದ್ದರು. ನಾನೂ ಅಲ್ಲಿಯೇ ಇದ್ದೆ. ನಮ್ಮೊಡನೆ ಅದೂ ಇದೂ ಮಾತನಾಡುತ್ತಿದ್ದ ಕೆಎಸ್‌ನ 'ನಾನು ಏನು ಮಾಡಬೇಕೆಂತಿದ್ದೋ ಅದನ್ನು ಮಾಡಿದೀನಿ. ನನ್ನ ಅಳವಿಗೆ ಮೀರಿದ್ದಕ್ಕೆ ಹೋಗಿಲ್ಲ. ಬರಬೇಕಾದ ಪ್ರಶಸ್ತಿಗಳೆಲ್ಲ ಬಂದಿವೆ. ನನಗೆ ಸಂತೃಪ್ತಿ ದೊರಕಿದೆ. ಈಗ ನನ್ನ ಕಣ್ಮುಂದೆ ಬರಿಯ ಬೆಳುದಿಂಗಳು ನೆಲೆಸಿದೆ; ಸಂತೋಷವಾಗಿ ಸಾಯ್ತೀನಿ. ನನಗೆ ಚಿಂತೆಯಿಲ್ಲ; ಮನಸ್ಸು ನಿರ್ಮಲವಾಗಿದೆ' ಎಂದರು. ಮುಂದುವರಿದು 'I am Glad to die as a poet; ಹಾಡ್ತಾನೇ ಇರ್ತೀನಿ, ಹಾಡ್ತಾನೇ ಸಾಯ್ತೀನಿ' ಎಂದರು. ಗೋಪಾಲಕೃಷ್ಣರಾಯರಿಗೆ ಇದು ನೆನಪಿದ್ದೀತು. ಮಾರನೆಯ ಬೆಳಿಗ್ಗೆ ಎಂದಿನಂತೆ ಅವರಲ್ಲಿಗೆ ಹೋಗಿ ಮಾತಾಡುತ್ತ ಕುಳಿತಿದ್ದಾಗ 'ಕುಮಾರ್, I thought I had understood the world. ಆದರೆ ನನಗೆ ಪ್ರಪಂಚ ಅರ್ಥವಾಗಿಲ್ಲ. ಈ ಸೂರ್ಯ, ಈ ಚಂದ್ರ, ಈ ನಕ್ಷತ್ರ, ಈ ಬೆಳುದಿಂಗಳು ಇದ್ದೇ ಇರುತ್ವೆ–ಶಾಶ್ವತವಾಗಿ. ನಾವು ಮಾತ್ರ ಇರೋಲ್ಲ, ಅಷ್ಟೆ. ಬೆಳ್ದಿಂಗಳು, ಎಲ್ಲೆಲ್ಲೊ ಕೇವಲ ಬೆಳ್ದಿಂಗಳು ನನ್ನ ಕಣ್ಮುಂದೆ...' ಎಂದರು. ಅವರದೇ 'ಗಡಿಯಾರದಂಗಡಿಯ ಮುಂದೆ' ಕವನದ —

'ನಾನಾದೆ ನಕ್ಷತ್ರ ನೀಲಿ, ಕೆಂಪಿನ ಲಾಲಿ;<br>
ದೂರ ತೀರದ ನಿನ್ನ ಬಳಿಗೆ ಕರೆದೆ.<br>
ಆಗ ಚೈತ್ರದ ಮಾವು ಜೂಲುನಾಯಿಯ ಜೋಲಿ,<br>
ತಳಿರ ಕೆನ್ನಾಲಗೆಯ ಬೆಂಕಿ-ಪರದೆ...'

ಸಾಲುಗಳಿಂದ ತೊಡಗಿ,

'ಹೊತ್ತ ಮೂಟೆಗಳೇನು! ಹಿಡಿದ ಗಿಂಡಿಗಳೇನು?
ಹೆಜ್ಜೆ ಸಾಲಿನ ಪಯಣ ನಾರಾಯಣ' –

ವರೆಗೆ ತಮಗೆ ತಾವೇ ನಿಧಾನವಾಗಿ ಒಂದೊಂದು ಪದವನ್ನೂ ಸ್ಪಷ್ಟವಾಗಿ ಹೇಳಿಕೊಂಡರು. ಇಡೀ 'ಪ್ರಥಮ ರಾಜನಿಗೆ' ಕವಿತೆಯನ್ನು ಸ್ವಲ್ಪ ಎತ್ತರದ ದನಿಯಲ್ಲಿ ಹೇಳಿಕೊಂಡರು. 'ಇಡದಿರುವ ನನ್ನ ನಿನ್ನ ಸಿಂಹಾಸನದ ಮೇಲೆ' ಕವನದ —

'ತಾಯಿ ದೇವರು' ಎಂದು ತಾರೆಗಳು ಹಾಡಿದವು;
'ಆಕೆ ಮಾಯೆಯೆ' ಎಂದರರಿಯದವರು.
ಅವಳ ಪ್ರೇಮದ ಸವಿಯ ನೀನು ಕಂಡಿರಬಹುದು,
ಆ ವಸುಂಧರೆಯ ಮಗ ನಾನು...'

ಸಾಲುಗಳಿಂದ ತೊಡಗಿ,

'ಬಂದ ಬಾಗಿಲು ಮಣ್ಣು : ಬಿಡುವ ಬಾಗಿಲು ಮಣ್ಣು
ನಡುವೆ ಕಾಪಾಡುವುದು ತಾಯ ಕಣ್ಣು
ಈ ಕಣ್ಣ ಸೆರೆಯ ಕಲ್‌ಕೋಟೆಯೆಲ್ಲಾ ಹೊನ್ನು;
ನನ್ನ ಕೈಬಿಡುವುದೇ ನಿನಗೆ ಚೆನ್ನು'

ವರೆಗೆ ಹೇಳಿಕೊಂಡರು. ಆ ಬಳಿಕ 'ಶಿಲೆಗೆ ಹೂವಿನ ವಂಶ' ಕವನದ

'ನದಿಗಳೆಲ್ಲ ನಿನ್ನೆದೆ ಹಾಲು
ಬೆಟ್ಟ ಸಾಲು ನಿನ್ನ ಹೆಗಲು
ಹಗಲು ನೀನು ನಗಲು;
ಇರುಳು ನಿನ್ನ ನೆರಳು.
ಹಸಿರುಡುಗೆ, ಮುಗಿಲಿನೊಡವೆ!
ಮುನ್ನೀರ ಮೇಲೆ ಕಣ್ಣೀರ ಸುರಿವ ತಾಯೆ,
ನೀನಲ್ಲ ಮಾಯೆ...'

ಎಂದು ನುಡಿಯುತ್ತ ಗದ್ಗದಿತರಾದರು. ಅವರ ದನಿ ಕಂಪಿಸುತ್ತಿತ್ತು; ಕಣ್ಣು ಹನಿಯುತ್ತಿತ್ತು. ಅದನ್ನು ಕಂಡು ನನ್ನ ಕಣ್ಣು ತೇವಗೊಂಡಿತು; ದುಃಖ ಉಕ್ಕಿಬಂತು. 'ತಾಯಿ, ಓ ಅಮ್ಮಾ...' ಎಂದು ಆರ್ತರಾಗಿ ಕೂಗಿ ಕರೆದರು. 'ಈ ವಸುಂಧರೆಯ ಮಗ ನಾನು' ಎಂದು ಹೆಮ್ಮೆಯಿಂದೆಂಬಂತೆ ಎತ್ತರದ ದನಿಯಲ್ಲಿ ಕೂಗಿ ಕರೆದರು. 'ಈ ವಸುಂಧರೆಯ ಮಗ ನಾನು' ಎಂದು ಹೆಮ್ಮೆಯಿಂದೆಂಬಂತೆ ಎತ್ತರದ ದನಿಯಲ್ಲಿ ಮೃದುವಾಗಿ ಬೆರಳುಗಳಿಂದ ಎದೆ ತಟ್ಟಿಕೊಂಡು ಹೇಳಿದರು. ತಾವು ದೃಢವಾಗಿ ನಂಬಿದ್ದ, ತಮ್ಮನ್ನು ಕಾಪಾಡಿಕೊಂಡು ಬಂದಿದ್ದ ತಾಯಿಸತ್ವಕ್ಕೆ ತಮ್ಮ ಕೃತಜ್ಞತಾಪೂರ್ವಕ ಆತ್ಮನಿವೇದನೆಯನ್ನು ಸಲ್ಲಿಸುತ್ತಿರುವುದರ ಜೊತೆಗೆ ಇಂಥ ಉತ್ಕೃಷ್ಟ ಕವಿತೆಗಳನ್ನು ತಾವು ಬರೆದಿದ್ದೇನೆನ್ನುವ ಧನ್ಯತೆಯ, ಸಂತೃಪ್ತಿಯ, ಸಮಾಧಾನದ, ಸಾರ್ಥಕತೆಯ ಭಾವವೂ ನಿಸ್ಸಂದೇಹವಾಗಿ ಆಗ ಅವರಲ್ಲಿತ್ತು ಎನ್ನಿಸುತ್ತೆ ನನಗೆ. ಅಲ್ಲಿಗೇ ನಿಲ್ಲಲಿಲ್ಲ; ಶ್ರೀಯವರ 'ಇಂಗ್ಲಿಷ್ ಗೀತೆಗಳ'ಲ್ಲಿನ 'ಕಾರಿಹೆಗ್ಗಡೆಯ ಮಗಳು', 'ಚೋಳ ಕನ್ನೆಯರು', 'Home they brought the warrior dead' ಕವನಗಳ ಸಾಲುಗಳನ್ನೂ 'ಪ್ರಾರ್ಥನೆ' ಪದ್ಯದ —

'ಕರುಣಾಳು ಬಾ ಬೆಳಕೆ ಮುಸುಕಿದೀ ಮಬ್ಬಿನಲಿ
ಕೈ ಹಿಡಿದು ನಡೆಸೆನ್ನನು'

ಸಾಲುಗಳನ್ನೂ ಉದ್ದಕ್ಕೆ ನುಡಿದುಕೊಂಡರು. ನಿರ್ಲಿಪ್ತ ದನಿಯಲ್ಲಿ 'ಇಲ್ಲ, ನಾನು ಉಳಿಯೋಲ್ಲ ಇನ್ನು' ಎಂದರು ಕಣ್ಣು ಮುಚ್ಚಿಕೊಂಡು. ಬಹುಶಃ ಅವರ ಆ ಮಾತು ನಿಜವಾಗಿಬಿಡಬಹುದು ಎನಿಸಿತು ಒಂದು ಕ್ಷಣ – ಅವರಿದ್ದ ಸ್ಥಿತಿಯನ್ನು ಕಂಡು, ಅವರ ಮಾತನ್ನು ಕೇಳಿ. ಆದರೆ ಹಾಗಾಗಲಿಲ್ಲ. ಮರುಕ್ಷಣವೇ ಕಣ್ತೆರೆದು 'ವೆಂಕಟೇಶಮೂರ್ತಿ'' ಎಂದು ಕೂಗಿದರು. 'ಏನು ಸರ್, ಇಲ್ಲೇ ಇದೀನಿ– ನಿಮ್ಮ ಪಕ್ಕದಲ್ಲಿಯೇ' ಎಂದೆ.

'ಎಲ್ಲಿಗೊ ಹೊರಟಿರುವೆ
ನಾನರಿಯದೆಡೆಗೆ'

ಎಂದು ಬಿಗಿಯಾಗಿ ನನ್ನ ಕೈಹಿಡಿದುಕೊಂಡರು. ಸ್ವಲ್ಪ ತಡೆದು,

'ಎಣ್ಣೆ ಮುಗಿದಿದೆ
ದೀಪ ಉರಿದಿದೆ
ಬೆಳಕು ಆರಲಿದೆ'

ಎಂದರು. 'ಖಂಡಿತಾ ಇಲ್ಲ ಸರ್, ಹಾಗೆನ್ನಬೇಡಿ' ಎಂದೆ. 'ಆರದಿರಲಿ ಬೆಳಕು' ಎಂದೇ ನನ್ನ ಹೃದಯ ಹಂಬಲಿಸಿತು. 'ಎಲ್ಲೋ ಬಿದ್ದು ಸಾಯಬೇಕಿದೆಯೇನೋ ಎನ್ನಿಸಿತ್ತು. ಹಾಗಾಗಲಿಲ್ಲ. ಮನೆಯಲ್ಲೇ ಮಲಗಿದೀನಿ. ಸಂತೋಷವಾಗಿ ಸಾಯ್ತೀನಿ. ನನಗೆ ಸಾವಿನ ಹೆದರಿಕೆ ಇಲ್ಲ. ಆದರೆ ಈ ನೋವು, ಸಂಕಟ ತಡೆಯೋಕೆ ಆಗೋಲ್ಲಪ್ಪ' ಎಂದರು. 'Abrupt ಆಗಿ ಮುಗಿಯುತ್ತೆ ಅಂದುಕೊಂಡಿದ್ದೆ. ಏಕೊ ಮುಂದೆ ಮುಂದೆ ಹೋಗ್ತಾ ಇದೆ. ಧೈರ್ಯವಾಗಿದೀನಿ ನಾನು' ಎಂದರು.

ವಿಧಿ, ಅವರಂದುಕೊಂಡಂತೆ ಅವರ ಅಂತ್ಯವನ್ನು ಇನ್ನಷ್ಟು ದಿನ ಮುಂದೂಡಿ, ಮತ್ತೊಂದು ವಾರ ಬೇರೊಂದು ನರ್ಸಿಂಗ್ ಹೋಂ ವಾಸದ ಶಿಕ್ಷೆಯನ್ನೂ ಅವರು ಅನುಭವಿಸಿ, ಮನೆಗೆ ಹಿಂದಿರುಗುವಂತೆ ಮಾಡಿತು. ಯಾವೊಂದು ದಿನವೂ ವಿಸ್ಮೃತಿ ಅವರನ್ನು ಕಾಡಲಿಲ್ಲ; ಪ್ರಜ್ಞಾವಂತ ಸ್ಥಿತಿಯಲ್ಲಿಯೇ ಇದ್ದರು. ಕೊನೆಗೆ ಡಿಸೆಂಬರ್ ೨೮ರ ರಾತ್ರಿ ಅವರಿಗೆ ಇಲ್ಲಿನ ಕಷ್ಟಕಾರ್ಪಣ್ಯ, ನೋವು ಸಂಕಟಗಳಿಂದ ಶಾಶ್ವತ ಮುಕ್ತಿ ದೊರಕಿತು.

A Tireless singer of beauty and love ಆಗಿದ್ದ ತಮ್ಮ ಎದೆ ತುಂಬ ನಕ್ಷತ್ರಗಳನ್ನು ಬಚ್ಚಿಟ್ಟುಕೊಂಡಿದ್ದ

'ಇಷ್ಟರಲ್ಲೆ ನಾನಾಗುವೆ
ದೂರ ದೂರ ತಾರೆಗೆ'

ಎಂದು ಕೆಲವೇ ತಿಂಗಳ ಹಿಂದೆ ಹಾಡಿಕೊಂಡಿದ್ದ ಕವಿ, ಈಗ ಸ್ವಯಂ ತಾರಗೆಯಾದರು. ಆದರೇನು?

'ಸಿರಿಗೆರೆಯ ನೀರಲ್ಲಿ ಬಿರಿದ ತಾವರೆಯಲ್ಲಿ
ಕೆಂಪಾಗಿ ನಿಮ್ಮ ಹೆಸರು.
ಗುಡಿಯ ಗೋಪುರದಲ್ಲಿ ಮೆರೆವ ದೀಪಗಳಲ್ಲಿ
ಬೆಳಕಾಗಿ ನಿಮ್ಮ ಹೆಸರು'

– 'ಸುಮನಾ'

ನಂ. ೨೫, ವಸುಂಧರ, 'ಸಿ' ಕ್ರಾಸ್, ರಾಜೀವನಗರ,
ಬಿಎಸ್‌ಕೆ ೩ನೇ ಹಂತ, ೪ನೇ ಘಟ್ಟ ಬೆಂಗಳೂರು – ೫೬೦ ೦೫೮

# ಒರಳು ಕಲ್ಲು

◆ ಸುನಂದಾ ಪ್ರಕಾಶ ಕಡಮೆ

ಮೇಲೆ
ಉರುಟುರುಟು ಗುಂಡು
ಕೆಳ ಒರಳಲ್ಲಿ ಮಸಾಲೆ

ತಿರುಗುತ್ತ ತಿರುಗುತ್ತ
ಸರಳ
ನಿರಂತರ ಭೂ ಚಕ್ರ

ಶಿವಲಿಂಗದ ಆಕಾರ
ಒತ್ತಿ ತೀಡಿದರೆ ಗಂಧ

ರಟ್ಟೆಯ ಸಾರವೆಲ್ಲ
ಒಡಲಿನಾಳಕ್ಕಿಳಿದು

ಬೆರೆಸುತ್ತ ತುಸು ನೀರು
ಅಂಗೈ ಉರಿದಷ್ಟೂ ರುಚಿ

ತೆಂಗಿನ ತುರಿಯ ಜತೆ ಎಲ್ಲಿಯೋ
ತಪ್ಪಿ ಬಿದ್ದಿತ್ತು ಪುಟ್ಟ ಗರಟೆ ಚೂರು

ಇದೀಗ
ನೆಲವನ್ನೇ ನಡುಗಿಸುವ
ಗಡಗಡ ಸದ್ದು

ಥಟ್ಟನೆ ಒರಳು ಕಲ್ಲನು
ಬಿಟ್ಟ ಮಸಾಲೆ
ಝಿಲ್ಲನೆ ಹಾರಿ
ಆಗಸಕ್ಕೆಲ್ಲ ಚಿತ್ತಾರ

ಸೂರ್ಯ ಚಂದಿರ
ಚುಕ್ಕೆಗಳ ಕಣ್ಣಲ್ಲಿ ಖಾರ

ಅದೋ ಬೀಳುತ್ತಿದೆ ಈಗ
ಮಸಾಲೆ ಮಳೆ

ಹಳ್ಳಕೊಳ್ಳ ನದಿ ಸಾಗರ
ಎಲ್ಲೆಡೆ ಮಸಾಲೆಯ ಆಗರ

ಎರಡೇ ದಿನದಲ್ಲಿ
ವಿಲಿವಿಲಿ ಒದ್ದಾಡುತ್ತ
ಬಿದ್ದಿತು ದಂಡೆಯಲ್ಲಿ

ಕಾಮ ಕ್ರೋಧ ಲೋಭ
ಮೋಹ ಮದ ಮತ್ಸರ

ಹದ್ದು - ಕಾಗೆಗಳು ಕುಕ್ಕಿಕುಕ್ಕಿ ತಿಂದವು
ಒರಳು ಕಲ್ಲು ಶಾಂತವಾಯಿತು.

---

೯೦, 'ನಾಗಸುಧೆ', ಕಾಳಿದಾಸನಗರ
ವಿದ್ಯಾನಗರ, ವಿಸ್ತರಣ, ಹುಬ್ಬಳ್ಳಿ - ೫೮೦ ೦೩೧



# ಮಗುವಿನ ಹೆಣ

◆ ಬಿ.ಎನ್. ರವಿ ಮೂರ್ನಾಡು

ಅದು ಹೇಗೆ ಮಲಗಿದೆ
ನೋಡಿ....
ಅರೆ ಬಿರಿದ ಕಂಗಳಲಿ
ಅರ್ಧಲೋಕ
ತೆರೆದು, ಕನಸುಗಳ
ರೆಪ್ಪೆಗಳಡಿ ಹಿಡಿದು.
ಹವಳದ ತುಟಿ
ಕೆಂಪು, ಒಡೆದಿದೆ
ಹನಿ ಹಾಲಿಗೆ ಮೊರೆದು.
ಚುಂಬಿಸಿದ ಇರುವೆಗಳು
ಮಾತಾಡುತ್ತಿವೆ...
ನಿದ್ದೆ ಹೋಗಿದೆ ಮಗು

ಆ... ದಾರಿಯಲಿ
ನಾಯಿಗೆ ಮೂಗಿಲ್ಲ
ಕಾಗೆಗೆ ರೆಕ್ಕೆಗಳಿಲ್ಲ
ರಣಹದ್ದುಗಳಿಗೆ
ಆಕಾಶವೇ ಇಲ್ಲ
ಬೋರಲು ಬಿದ್ದ ಸುನಾಮಿ ನೆಲದಲಿ
ಎಲ್ಲವೂ ನಿಶ್ಚಿಂತ.

ಅದೋ... ಹೆಜ್ಜೆಯಿಕ್ಕಿದೆ
ಅದೊಂದು ಸಾಂತ್ವನದ ಗಾಳಿ
ನುಣುಪು ಕೂದಲ ಸವರಿ
ಮೂಗಿನೊಳಕ್ಕೆ ನುಸುಳಿ
ಬೇಗೆಯ ಸೀಟಿ ಊದುತ್ತಿದೆ
ಒಂದಷ್ಟು ಮರಳ ಬಾಚಿ
ಇಷ್ಟಗಲ ದೇಹ ಮುಚ್ಚುತ್ತಿದೆ
ಮಗುವೇಕೆ ಅಳಲೊಲ್ಲದು?

ಮನೆ ನಂ. ೮/೪೪೮, ಮುತ್ತಪ್ಪ ದೇವಸ್ಥಾನದ ಹಿಂಭಾಗ
ಮಡಿಕೇರಿ, ಕೊಡಗು - ೫೭೧ ೨೦೧

# ಬೆಳಕು

◆ ವನಿತ ಪಿ.

ಬೆಳಗುತಿದೆ ಹೊಳೆಯುತಿದೆ
ಹಿರಿದಾಗಿ ಕಿರಿದಾಗಿ
ಕಣ್ಣು ಕೋರೈಸುವ ವಿಶ್ವರೂಪ

ಗತ ಶತಮಾನಗಳ ಬಾಗಿಸ
ಹಿಂದು ಮುಂದಾದರೂ
ನನಗೆ ದಕ್ಕಿದ್ದು ನನಗೆ

ಜೀವಧಾತುಗಳು
ಗುರುತು ಸಿಕ್ಕದೆ ಹೋಗಿ
ಪ್ರಶ್ನೆಗಳ ಸುಳಿಗಾಳಿ

ಬೆಳಕಿನರಮನೆಯಲ್ಲಿ
ತಳವಿರದ ಕತ್ತಲಲ್ಲಿ
ತೂಗಾಡುವ ಸವಾಲು

ಹೀರುತ್ತಿದೆ ಮುಗಿಯುತ್ತಿದೆ
ಕರಕಾಗಿ ಬೀಳುತ್ತಿದೆ
ಬೆಳಕಿನ ಬೂದಿ

ಬಂಗಾರದ ಅಂಗಳದಲ್ಲಿ
ಮಿಸುಕಾಡದ ಬಂಜೆ
ದಂಡಾಧಿಪತಿ ನಾನು

೫೦, ೧೫ನೇ ಕ್ರಾಸ್, ೧೯ನೇ ಮೈನ್, ಜೆ.ಪಿ. ನಗರ,
೨ನೇ ಹಂತ, ಬೆಂಗಳೂರು - ೫೬೦ ೦೭೮

# ವಿವಾದ

◆ ನಾಗಮಂಜುಳ ಜೈನ್

ನನ್ನಜ್ಜ ನನಗೊಂದು
ರೇಸಿಮಿ ಲಂಗ ದಾವನಿ
ಹೊಲಿದಿದ್ದ ಅದ್ಹೆಂಗಿತ್ತಂದ್ರಿ
ಅದೆಷ್ಟ್ ಚಂದಿತ್ತಂದ್ರಿ
ಎಷ್ಟ್ ಅಂದಿತ್ತಂದ್ರಿ...

ಹಂಗ ಅದೊಂದಿಷ್ಟ ಉದ್ದಿತ್ತ
ಮಂದಿ ಬಂದು ಮಡಿಚಿ
ಉಡಿಸಿ ನೋಡಿದ್ರ
ಮತ್ತ ಇನ್ನೇಸು ಮಂದಿ
ನಡೂಕ ಬಂದು ಕನ್ನಡಿ ಹಳ್ಳಿದ್ರ
ಚಂದಕತಿ ಅಂದ್ರ

ಹಚ್ಚೇ ಬಿಟ್ರು ಖರೇನ
ಮತ್ತಷ್ಟು ಮಂದಿ ಬಂದ
ಮತ್ತೊಂದು ಹಚ್ಚಿ
ಉಡುಸಿ ನೋಡಕತ್ತಿದ್ರು

ಈ ಪುಟ್ಟಿಗಂತು
ನನ್ನಜ್ಜ ಪುಟ್ಟಜ್ಜ ಹೊಲಿದಿದ್
ರೇಸಿಮಿ ಲಂಗ ಹೌದ ಅಲ್ಲ
ಅನ್ನೋ ಹಂಗ ಡೌಟ ಬಂತು

ಮಡಿಚಿದ್ ಬಿಚ್ಚಿ
ಕನ್ನಡಿ ತಗದು
ನಿಮ್ಮಜ್ಜ ಪುಟ್ಟಜ್ಜ
ಹ್ಯಾಂಗ್ಹೊಲ್ದಿದ್ನೋ
ಹಂಗ ಉಟ್ಕಳಮ
ಪುಟ್ಟಿ ನೀ
ಲಂಗ ದಾವನೀನ ಅಂದ್ರು

ಅದ್ರೂ

ಕನ್ನಡಿ ಮಾತ್ರ
ಒಬ್ಬೊಬ್ರ ಬಂದು
ನನ್ನ ಕನ್ನಡಿ ಹಚ್ಚ
ನನ್ನ ಕನ್ನಡಿ ಹಚ್ಚ
ಅನ್ನಾಕತ್ತಿದ್ರು

ಯಾರ್‍ಯಾರ್ ಏಸೇಸ್
ಕನ್ನಡಿನರ ಹಚ್ಲಿ
ಏಸೇಸ್ ಕನ್ನಡಿನರ ಬಿಚ್ಲಿ
ನನ್ನಜ್ಜ ಪುಟ್ಟಜ್ಜ ಹೊಲಿದಿದ್
ರೇಶ್ಮಿ ಲಂಗನ ಕೊನಿಗೆ
ಚಿಂದಿ ಚಿಂದಿ ಮಾಡ್ಬಿದ್ರ
ಅಷ್ಟ ಸಾಕು.

---

ಕುವೆಂಪು ಅವರ ನಾಡಗೀತೆಯ ವಿವಾದದ ಹಿನ್ನೆಲೆಯಲ್ಲಿ ಬರೆದ ಕವಿತೆ.

---

D/o ಜೆ. ದೇವೇಂದ್ರಪ್ಪ, ಚಾರು ನಿಲಯ ವಿಜಯನಗರ ಬಡಾವಣೆ,
ಹೂವಿನ ಹಡಗಲಿ, ಬಳ್ಳಾರಿ ಜಿಲ್ಲೆ – ೫೮೩ ೨೧೯

# ಕಾಲ : ಮೋಡದ ಸತ್ಯ

◆ ಅರುಣ್ ಜೋಳದ ಕೂಡ್ಲಿಗಿ

೧

ಹಕ್ಕಿಯ ಹಾರುವಿಕೆಗೆ
ಬಯಲಲ್ಲಿ ರಸ್ತೆ
ಮರದಲ್ಲಿ ನಿಲ್ದಾಣದ
ಕಾಮಗಾರಿ ನಡೆದಿದೆ!

ಮಗುವಿನ
ಕನಸಿಗೀಗ
ಮಾತು ಕಲಿಸುವ ಬಾಕಿ ಇದೆ!

೨

ರದ್ದಿ ಪೇಪರ್
ಕೊಳ್ಳುವವನ
ಕೈಗಾಡಿಯಲ್ಲಿ
ಜಗತ್ತು ಉಸಿರು ಕಟ್ಟಿ
ಮಲಗಿದೆ!

ಆ ತಾಯಿ ನಿಜದ ಕತೆ
ಬರೆದದ್ದು
ಹರಿವ ನೀರ ಮೇಲೆ!

೩

ಗುಜರಿ ಅಂಗಡಿಯಲ್ಲಿ
ನುಜ್ಜಾದ
ಬುದ್ಧನ ಪ್ರತಿಮೆಗೀಗ
ಶಾಂತಿಯ ಸ್ಪರ್ಶ ಸಿಕ್ಕಿದೆ!

ಕಾಲ ಕುತೂಹಲಕ್ಕೆ
ಮಣಿದ ಆತ
ಬಯಲಿಗೆ ಬಟ್ಟೆ ತೊಡಿಸುವಾಸೆಯ
ಸಣ್ಣ ಚೂರು!

೪

ಮೋಡದ ಸತ್ಯಕ್ಕೆ
ಮೋಹಗೊಂಡವಳ
ಉಡಿಯಲ್ಲಿನ ಬೀಜ
ಹೇಳುತ್ತದೆ...

ನೀ ನಡೆಯುತ್ತಿರುವುದು
ನೆಲದ ನೆತ್ತಿಯ ಮೇಲೆ!

ಜಾನಪದ ವಿಭಾಗ, ಕನ್ನಡ ವಿ.ವಿ.
ಹಂಪಿ, ವಿದ್ಯಾರಣ್ಯ – ೫೮೩ ೨೭೬

# ಯಂತ್ರ

◆ ಅನಂತ ಹುದೆಂಗಜೆ

ತುಕ್ಕು ಹಿಡಿದ ಹಳೆ
ಯಂತ್ರದ ಮುಂದೆ
ಹೊಗೆ ಧೂಳು ಶಬ್ದ ಬೆವರು
ದುಡಿದು ದಣಿದ ಜೀವ

ಗೂರಲು ಕೆಮ್ಮಿನ ಅಪ್ಪ
ಹೊರ ಬಾಗಿಲ ಹಿಂದಿನ
ಕತ್ತಲಲ್ಲಿ ಕಾಯುತ್ತಾ
ಕೊರಗುವ ಅವ್ವ

ಮನಸ್ಸು –
ಹಲವು ಯೋಚನೆಗಳ
ಸಂತೆ
ಇಲ್ಲ ನಿಶ್ಚಿಂತೆ

ಒಂದು ಹೊರಳು
ಒಂದು ನೆರಳು
ಬಿರು ಬಿಸಿಲಿಗೆ
ದಟ್ಟ ನೆರಳು

ಬೆಳೆಯುತ್ತಿದೆ ನೆರಳು
ಕಡಲಿಗಿಳಿದಂತೆ ಸೂರ್ಯ
ಕಳೆಯುತ್ತಿದೆ ಬಾಳು
ಮರಳಿದೆ ಗೂಡಿಗೆ
ಬೆಳ್ಳಕ್ಕಿ ಸಾಲು

ಅಮಾವಾಸ್ಯೆಯ ಕತ್ತಲು
ಕವಿಯುತ್ತಿದೆ ಸುತ್ತಲು
ಅಂಬಲಿಯುಂಡು ಕಂಬಳಿ ಹೊದ್ದು
ಕಮಟು ವಾಸನೆಯ ದಿಂಬಿಗೆ
ತಲೆ ಆನಿಸಿದಾಗ –

ಕಳೆಯದಿರಲಿ ಇರುಳು
ನೆಮ್ಮದಿ ನಿಟ್ಟುಸಿರು
ಸಿಟ್ಟು – ಮುಂಜಾವ
ಹುಟ್ಟುವ ಸೂರ್ಯನ ಮೇಲೆ

ಮಂಜುವಾಣಿ ಕಾರ್ಯಾಲಯ, ಉಜಿರೆ - ೫೭೪೨೪೦
ಬೆಳ್ತಂಗಡಿ ತಾ॥ ದ. ಕ.

# ಮಗಳೆನ್ನುವ ಮಗಳೆ

◆ ಆರ್. ತಾರಿಣಿ ಶುಭದಾಯಿನಿ

ಹಸಿಮಾಂಸ ಮುದ್ದೆಯಲ್ಲಿ
ಗುಲಾಬಿ ಬಟ್ಟಲು
ಜೀವ ಮಿಸುಕಿರಲು
ಹಸಿ ಹಾಲಿನಂತೆ
ಬಿಳಿ ನೊರೆಯ ಬುರುಗು ನಗು!

ಜೇನಿಳಿಸಿ ನಕ್ಕಿವೆ ತುಟಿ
ಮಿರುಗು ನಕ್ಷತ್ರವೆ
ದೇಹವಾಗಿ, ಭೂಮಿಗೆ ಐತಂದಿದೆ
ಸೇರು ಬೆಣ್ಣೆಯೊಲುಮೆ
ತುಂಬಿದೆ, ಚೆಲುವೊ
ಹರಡಿ ಹಬ್ಬಿದೆ
ಸಂಜೆ ಬೆಳಗಿನ ಹಾಗೆ
....
....

ಅರೆ, ಇದೇನು?
ಹೆಣ್ಣು ಮಗುವೆ,
ಅದಕ್ಕೇ ಲೋಕ ಮುಳುಗಿಸುವ
ಅನಿಷ್ಟ ಚೆಲುವು
ಯಾಕೆ ಹುಟ್ಟಿತೋ
ಮನೆಯ ಮುಳುಗಿಸಲು

ತೊಟ್ಟಿಲು ಗಿರಕಿ
ಹೊಡೆದಿದೆ,
ಬಾಣಂತಿ ಕೆನ್ನೆ ತಟ್ಟಿ
ಸಂತೈಸುವ ಕೈಗಳೇಕೊ
ಮರಗಟ್ಟಿದಂತಿದೆ
ತಂದೆಯ ಮುಖದಲೇನೋ
ಖಿನ್ನತೆ,
ನಗೆಯುಳಿದೀತೆ ಇನ್ನು?

---

ಇಂಗ್ಲಿಷ್ ಉಪನ್ಯಾಸಕಿ, ಸರ್ಕಾರಿ ಪ್ರ.ದ. ಕಾಲೇಜು
ಹೊಸದುರ್ಗ - ೫೭೭ ೫೨೭

# ಹಂಬಲ

◆ ಪ್ರಭಾಮಣಿ ನಾಗರಾಜ

ಕುಡಿಯ ಸುಡಲು
ಸಿದ್ಧವಾಗಿರುವ ಕೊಳ್ಳಿ

ದಾಂಗುಡಿ ಇಡುವ
ದಟ್ಟ ಹಂಬಲಕೆ
ಪೂರಕವಾಗಲು
ಒಗ್ಗೂಡಿದ
ಅಂತಃಶಕ್ತಿಯೂ
ವಿಫಲ

ಬಾಹ್ಯ ಪ್ರೇರಣೆಗೆ
ಪಕ್ಕಾಗದಂಥಾ
ಸ್ಥಿತಿಗಾಗಿ ಹೆಣಗಿದ್ದೂ
ಆಯ್ತು
ಮರಳೊಳಗೆ
ಬೇರ ತೂರಿಸಿ
ಜಲವನರಸಿದಂತೆ!

ಈ ಭುಗಿಲೇಳುವ
ಒಡಲುರಿಯ
ತಣಿಸಲಾಗದು
ಸಪ್ತ ನದಿಗಳ
ಆಪೋಷನ!

ಧ್ಯಾನಿಸುವ ಮನಕ್ಕೂ
ಎಣೆ ಇಲ್ಲದ ತಲ್ಲಣ!

ಬದ್ಧತೆಯ
ಹಾಸು ಹೊಕ್ಕಿನಲಿ
ಲಯವಾಗುತ್ತಿದ್ದರೂ
ಬುದ್ಧತ್ವ ಹೊಂದುವ
ಹಂಬಲ
ಈ ಬಡ
'ಬೋಧಿ' ವೃಕ್ಷಕ್ಕೆ!

---

ಶ್ರೀರಕ್ಷಾ, ಹುಣಸಿನಕೆರೆ, ಸೇತುವೆ ಹತ್ತಿರ,
ಹಾಸನ - ೫೭೩ ೨೦೧

# ಹಣ್ಣೆಲೆಯ ಮೊಂಡಾಟ

◆ ಚೂಡಾಮಣಿ ರಾಮಚಂದ್ರ

ಹಸಿರಳಿದು ಹೊಂಬಣ್ಣ ತಾಳಿದ ಎಲೆಗೆ
ಗಾಳಿಯ ಭಯ ಜಾಸ್ತಿ ಆಗಿತ್ತು
ಈ ಸುಡುಗಾಡು ಸುಂಟರಗಾಳಿ
ಜೀವ ತೆಗೆಯಲೆಂದೇ ಬಂದಿದೆ

ಬೇಡದ ಈ ಛಳಿಗಾಲ
ನನ್ನ ಅವಸಾನ ಸಾರುತಿದೆ
ಬಯಸದ ಈ ಬಿರು ಬಿಸಿಲು
ನನ್ನಿರುವ ಅಳಿಸುತಿದೆ

ನನ್ನ ಇರುವಿಕೆಯಿಂದ ಚೆಲುವಾದ ಈ ವೃಕ್ಷ
ನನ್ನ ನಿರ್ಗಮನಕೆ ಕಾಯುತ್ತಿದೆ
ಅಕ್ಕಪಕ್ಕದಲಿ ಚಿಗುರೊಡೆದ ಕೆಂದಲರುಗಳು
ಮುಸಿ ಮುಸಿ ನಗುತ್ತಿವೆ ನನ್ನ ಪರದಾಟ ಕಂಡು

ನಾನೂ ಇರುವೆ ಹಲವಾರು ವರುಷ
ಈ ಮರ ರೆಂಬೆ ಕೊಂಬೆಗಳಂತೆ

ಬಣ್ಣವಳಿದು ಹಳದಿಯಾದ ಆ ಹಣ್ಣೆಲೆ
ಕೂತೇ ಬಿಟ್ಟಿತು ಗಟ್ಟಿಯಾಗಿ ಅಂಟಿಕೊಂಡು
ಅದೂ ಒಂದು ರೀತಿಯ ಚೆಂದವೇ ಕಂಡಿತ್ತು
ಪುಟ್ಟ ಮೊಮ್ಮಕ್ಕಳ ನಡುವೆ ಕೂತ ಅಜ್ಜಿಯಂತೆ

೨೫/೧, ಶ್ರೀಗುರು ಕೃಪಾ, ಜೋಸೆಫ್ ನಗರ,
ಸಾಗರ - ೫೭೭ ೪೦೧

# ಶ್ರೀಸಾಮಾನ್ಯನ ಮೂರು ಮುಖ

◆ ಪೂರ್ಣಿಮಾ ಎಸ್.

೧

ಅಯ್ಯಾ;
ಅರ್ಜಿಯೊಂದಿಗೆ ಇಪ್ಪತ್ತೆಂಟು ಪ್ರಮಾಣ ಪತ್ರ
ಸೇರಿಸಿ, ಮೇಜಡಿ ಒಂದಿಷ್ಟು ತೂರಿಸಿ
ಆರ್ಥಿಕ ನೀತಿಗೆ ಸುಮ್ಮನಿದ್ದು ಕೊತ್ತಂಬರಿ ಬೆಲೆ
ಹೆಚ್ಚಾಯಿತೆಂದು ಬೀದಿಗಿಳಿವ ಬಡಪಾಯಿ ನಾನು

ಮೂಲೆಗೆ ಬಿದ್ದ ಸೀರೆಯ ಮೂಸದ ಮಡದಿ
ಕಾಮ್ರಿಕ್ಸನ್ನೋದುವ ಮಕ್ಕಳ ಚಿಂತೆ, ನನಗಿಲ್ಲ ತಂದೆ
ದೇಶಕ್ಕಾಗಿ ನಿದ್ರೆ ಬಿಡುವ ತಾಕತ್ತು - ಹಸಿವ, ಹುಸಿವ
ಒಡಲುಗೊಂಡವ ಪರಬೋಧಕ - ಸ್ವಯಂ ಸೇವಕ

ಬಯಲಲ್ಲೊಂದು ಮನೆಯ ಮಾಡಿ ಅಂಜುವ ಅಸ್ತಿತ್ವಕ್ಕೆ
ಅಂತರಂಗದ ಭಾವ ಗಂಟಲೊಡೆದು ಕೂಗುತ್ತಿದೆ
'ಹೆಳವನ ಮಾಡಯ್ಯ ತಂದೆ,
ತನ್ನಿಂದ ತಾನೇ ಓಡಿಹೋಗುವ ಮುನ್ನ'

ಕರೆಯಲಿಲ್ಲವಯ್ಯ ಯಾವ ಮೋಹನ ಮುರಲಿ
ಸೆಳೆದದ್ದೆಲ್ಲಾ ಕಿಸಬಾಯಿಯಂತೆ ಪಾಡುವ ಎಫೆಮ್ಮು
ಜಗ್ಗಲಿಲ್ಲ ಯಾವ ನಾಲ್ಕು ದೃಶ್ಯಕ್ಕೂ
ಕುಗ್ಗುತ್ತಿರುವವೊ ಹಬೆಯೂಡಿಸುವ ಛಾನೆಲ್‌ಗೆ ಸಿಕ್ಕು

೨
ಕೈಕಟ್ಟಿ ಪ್ರಶ್ನೆಯೊಂದಕೆ ಪ್ರಬಂಧದಷ್ಟು ಉತ್ತರಿಸುವ ಇವ
ಸಮಾಜ ಸೇವೆಯನ್ನೂ 'ದೂರ' 'ಶಿಕ್ಷಣ'ದಲ್ಲಿ ಮಾಡಿದವ
ಕೋಟ್ ಮಾಡಿದ ಕೋಟಾ ನಾಣ್ಯದ ಮಾತು
ಪುಸ್ತಕದಲ್ಲಿ ಹೂತ ತಲೆಯ ಹೊರಗೆಳೆಯೋ ಕಸರತ್ತು

ಗೆದ್ದರೆ ಗೆಲ್ಲಬೇಕು; ಬಾಹುಬಲಿಯಂತೆ – ಬಿಟ್ಟುಕೊಡುವುದರಿಂದ
ಅದಕ್ಕಾಗಿ ಬಿಟ್ಟುಕೊಟ್ಟಿದ್ದಾನೆ – ತನ್ನ ತನವನ್ನೇ
ಕುರ್ಚಿ ಕಿತ್ತಾಟದಲ್ಲಿ ನಿಲ್ಲದಯ್ಯ ನಲ್ಲಿ ಜಗಳ
ಅದಕ್ಕಾಗಿ ನಿಲ್ಲಿಸಿಬಿಟ್ಟಿದ್ದಾನೆ... ನೀರನ್ನೇ!

೩
ನಿಲ್ಲದು ಹಗಲ ಲಗಾಮ – ರಾತ್ರಿ ಕಾಡೋ ಕುದುರೆಗೆ
ಕೈಗೆಟುಕೋ ಸುರಕ್ಷಾ ಕವಚಕ್ಕೆ ಕಣ್ಣು ತೆರೆಸು
ಸಿಪ್ಪೆ ಸುಲಿಯದ ಜಲ್ಲೆಗೆ ಜೊಲ್ಲು ಸುರಿಸೋ
ವಿದೇಶೀ ತೀಟೇ ತೀರಿಸಿ ಉಪಕರಿಸು

ಅರೆಬೆತ್ತಲೆ ಅಂಗಾಂಗದಮೋಘ ಪ್ರದರ್ಶನದಲಿ
ಕುಗ್ಗದಂತೆ ಮಾಡಯ್ಯ ಬಡಕಲು ಎದೆ
ಬತ್ತಲಾಗುವ ಕ್ರಿಯೆಯಂತೂ ಸಾಲು-ಸಾಲು
ಸಿಕ್ಕದಿರಲಿ ತಂದೆ ಬಯಲು!

ನಂ. ೪೫, ೩ನೇ ಅಡ್ಡರಸ್ತೆ, ಮಾರುತಿ ಬಡಾವಣೆ
ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩



# ಅನುಕ್ಷಣದ ಚರಿತೆ

◆ ಬಿ.ಸಿ. ಶೈಲಾ ನಾಗರಾಜ್

ಝಳಪಿಸುವ ಒಡಲ ಹಿಂಸೆಗೆ
ಬರಲಿರುವ ಬೆಳಕ ಸಾಂತ್ವನ
ಚಾರು ಚೂರಿಗಳ ಚೌಕಾಬಾರದಲಿ
ದಿಟ್ಟಿ ನೆಟ್ಟ ಆಸೆ ಕಂಗಳು ಹತ್ತಾರು!

ಸೂತಕದ ಮನೆಯಿಂದ
ಸೊಲ್ಲ ಕೇಳುವ ತವಕ
ಹಿರಿ ಕಿರಿಯ ಕಿರಿಕಿರಿ
ಮನಸುಗಳು!

ಬಿತ್ತ ನೆಲದ
ಸತ್ವ ಪರಿಕಿಸುವ
ಬೀಜದುನ್ಮಾದಕ್ಕೆ
ಸೃಷ್ಟಿ ಮಾಟದ ಲೀಲೆ
ನಿಜದ ನೆತ್ತಿಯ ಮೇಲೆ
ರಕುತಾಕ್ಷತೆಯ ಸ್ತ್ರೀರಕ್ಷೆ
ದಾರ್ಷ್ಟ್ಯ ದೌರ್ಜನ್ಯಕ್ಕೆ
ಇತಿಹಾಸದ ಸಾಲು ಭಿಕ್ಷೆ!

ಮಾಯಾವಿ ನಂಬಿಕೆಯ
ನೂಲ ಎಳೆಯ ಪಯಣದಲಿ
'ಕತ್ತಲ ದಾರಿ ದೂರ'
ಜೀವ ಜೀವದ
ಒಡಲುರಿಯ ತಳಮಳದಿ
ಬಿಡುಗಡೆಯ ಭಾರ!

ಮುಟ್ಟು ಮಾಸಿನ
ಹೊಕ್ಕಳ ಬಳ್ಳಿಯ ನಂಟು
ಜಗದ ದಾಹಕೆ
'ಮೊಲೆಯೂಡುವ ತಾಯ ಮಾಯೆ'
ಕತ್ತಲು ಬೆಳಕಿನಾಟದ
ಅಣುಕ್ಷಣದ ಚರಿತೆಯಲಿ
'ಸದಾ ಪುರುಷ ಸೋಲೆ!
ಸದಾ ಪುರುಷ ಸೋಲೆ!!??'

---

ಶೈನಾ, ೨ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ,
ವಿಜಯನಗರ, ತುಮಕೂರು - ೫೭೨ ೧೦೧



## ಎಚ್.ಎಸ್. ಶಿವಪ್ರಕಾಶರ

# 'ನಿಮ್ಮ ಸೌಧಗಳು, ನಿಮ್ಮ ಮೂರ್ತಿಗಳು'

◆ ಕಾರಗಡಿ ಶಿವರಾಮ

'ತನ್ನೊಳಗೆ ಇರುವ ವಿರುದ್ಧ ದಿಕ್ಕಿನ ಸೆಳೆತಗಳನ್ನು ಕಂಡುಕೊಳ್ಳುವವನ ರೀತಿಯಲ್ಲಿ ಅವರು ಬರೆಯುತ್ತಾರೆ' – ಜಿ. ರಾಜಶೇಖರರ ಈ ಮಾತು ಎಚ್.ಎಸ್. ಶಿವಪ್ರಕಾಶರ ಒಟ್ಟು ಕಾವ್ಯದ ದೃಷ್ಟಿಯೇ ಆಗಿದೆ. ಕಾವ್ಯವಸ್ತುವಿನ ಹೊಸತನ, ಹೊಸ ಬಗೆಯ ಜೀವನ ಪರಿಕಲ್ಪನೆ, ಗಂಭೀರವೂ, ಮಾನವೀಯವೂ ಆದ ಚಿಂತನೆ ಶಿವಪ್ರಕಾಶರ ಕಾವ್ಯವನ್ನು ಜೀವಂತವಾಗಿಸಿದೆ. ನಮ್ಮ ಜನಮುಖೀ ಪರಂಪರೆಗಳಾದ ಭಕ್ತಿ ಮತ್ತು ಅನುಭಾವ ಇವರಿಗೆ ಪ್ರಮುಖ ಅಧ್ಯಯನ ಅಂಶ. ಈ ಹಿನ್ನಲೆಯಲ್ಲಿ ವೀರಶೈವ, ಬೌದ್ಧ, ಜೈನ್ ಮತ್ತು ಮಾರ್ಕ್ಸ್ ಇವರೊಳಗಿನ ಚಿಂತನೆಯಾಗಿದ್ದರೂ ಸ್ವತಂತ್ರ ಭಾವಸ್ಫುರಣೆ ಎದ್ದು ಕಾಣುತ್ತದೆ. ಅಲ್ಲಮನ ಅನುಭಾವಕ್ಕೆ 'ಭಾಷೆ ಕಿರಿದು' ಆಗಿದ್ದರೂ ಇವರಿಗೆ ಅಲ್ಲಮ ಬೆಳಕಾಗಿದ್ದಾನೆ. ಈ ಭುವಿಯ ಸ್ವಂತಕ್ಕೆ ತುಡಿಯುವ ಮನ 'ಯಾರೋ ಹಾಡುತ್ತಿರುತ್ತಾರೆ ಕನಸುಗಳಲಿ' ಎಂದು ವಿಸ್ಮೃತಿಗೊಳ್ಳುತ್ತಾರೆ. ಅದೇ ಕನಸು 'ಬೀದಿಯೆಲ್ಲಾ ರಕ್ತ, ಬಳೆಯ ಚೂರುಗಳು, ಬರಿಯ ಹಣೆಗಳು' ಎಂದು ಸಾಮ್ರಾಜ್ಯ ವಿಚ್ಛಿನ್ನವಾದ ಚಿತ್ರಣ ನೀಡುತ್ತಾರೆ. ಹೀಗೆ ಕಾವ್ಯ ಕೃಷಿಗೆ ಬದುಕಿನ ನಿಗೂಢತೆ ನೀಡುತ್ತಲೇ ಶೋಧಿಸುವ ಇವರು 'ದೇಸಿ' ನಿಲುವಿನ ತೀವ್ರ ಆಸಕ್ತಿ ಮತ್ತು ಭ್ರಮನಿರಸನ ಉಂಟುಮಾಡುವ ಒಂದು ಕಾವ್ಯದ ಅನುಸಂಧಾನ ಇಲ್ಲಿದೆ.

'ನಾ ಬಂದೆ ಏನಾರ ಕಟ್ಟಲೆಂದು
ಮರ ಮೈಮರೆತು ಉದುರಿಸಿದ
ಪುಳ್ಳೆ ಪುರಳೆಗಳನ್ನು ಹೆಕ್ಕಿಕೊಂಡು
ನೆಲಮುಗಿಲ ನಡುವೆ
ಗಾಳಿಗಿಂತಲೂ ಹಗುರ ಹೂಗುಚ್ಛಗಳ ತೊಟ್ಟ
ಹಸಿರು ಕಂದಿನ ಒಂದು ಕೊಂಬಿನ ಮೇಲೆ
ಪುಟ್ಟ ಮೊಟ್ಟೆಗಳನ್ನು ಹದ್ದು ಗಿಡಗಗಳಿಂದ
ರಕ್ಷಿಸುವ ಗೂಡೊಂದ ಕಟ್ಟಿಕೊಂಡು
ಗೀಜಗನ ಹಕ್ಕಿಗಳ ಶಾಗಿರ್ದನಾಗಿಲ್ಲಿ
ಬಾಳ ಬೇಕೆಂದು'

ತೀವ್ರ ಕನಸುಗಳಿಂದ ಆರಂಭವಾಗುವ ಕಾವ್ಯ ಕವಿಯ ಮನಸ್ಥಿತಿಯ ವಿಶ್ಲೇಷಣೆ ಕೂಡ ಆಗಿದೆ. ಈ ನಾಡು ಸಮೃದ್ಧವಾಗಿದೆ. ಬದುಕಿನಲ್ಲಿ ಎಲ್ಲವೂ ಜೀವ ಚೈತನ್ಯದಿಂದ ಕೂಡಿದೆ ಎಂಬ ನವೋದಯದ ಆಶಯವನ್ನು ಬಿಂಬಿಸುತ್ತದೆ. ಪ್ರಕೃತಿ, ಧರ್ಮ, ಮಾನವೀಯತೆ ಇದೆ ಎನ್ನುವ ಕವಿ 'ಕೆಡವಲಿಕ್ಕೆಂದು ನಾನಿಲ್ಲಿ ಬರಲಿಲ್ಲ' ಎಂದು ಹರ್ಷೋತ್ಸವದ ಧ್ವನಿ ಮಾಡುತ್ತಾರೆ. ನಮ್ಮ ಹಿರೀಕರು ಕಟ್ಟಿಕೊಂಡ ಸಂಪ್ರದಾಯ, ನಂಬಿಕೆಯ ಸೌಧಗಳು ಕವಿಗೆ ಆಕರ್ಷಕವಾಗಿ ಕಂಡಿದೆ. ಈ ಹೊಸತನವೇ ಆತನಲ್ಲಿ ನಿರಾಶೆ ಉಂಟುಮಾಡುತ್ತದೆ.

'ನಾ ಬಂದೆ ಏನಾರ ಕಟ್ಟಲೆಂದು'

ಕಾವ್ಯದ ಮೂಲಕ ಬದಲಾವಣೆ ಬಯಸಿದ ಕವಿಗೆ ಮಾರ್ಕ್ಸ್‌ನ ಚಿಂತನೆಗಳು ಪ್ರಭಾವ ಬೀರಿವೆ. ಈ ಬದುಕಿನ ಸಂಕಷ್ಟಗಳು ಆರ್ಥಿಕ ನೆಲೆಯಿಂದ ಉಂಟಾಗಿವೆ ಎಂಬುದು ಕೂಡ ಗೊತ್ತಾಗಿದೆ. ಆದರೆ ಕವಿಯ ಭಾರತೀಯ ಮನಸ್ಸು ಮಾರ್ಕ್ಸ್‌ನನ್ನು ಮರೆತಿದೆ. ಈ ಮರೆವಿಗೆ ಇಲ್ಲಿಯ ಬಗೆಗಿನ ಕನಸು ಕೂಡ ಕಾರಣವಾಗಿದೆ. ಆದರೆ ಅವೆಲ್ಲವೂ ತಾತ್ಕಾಲಿಕ ಭ್ರಮೆಗಳೆಂದು ಗೊತ್ತಾಗಿದೆ. ಪುಟ್ಟಗೂಡುಗಳಿಂದ ಜೀವನ ಆರಂಭಿಸಿ ಜಗದ ತುಂಬೆಲ್ಲ ಹರಡುವ ಹಕ್ಕಿಯ ಕನಸು ಕವಿಯಿಂದ ಇಂದು ಮರೆಯಾಗಿದೆ.

'ನಾನಂದುಕೊಂಡಿದ್ದೆ
ಪ್ರೇಮ ಪ್ರಾಮಾಣಿಕತೆಯ ಸಂಬಂಧವಿದೆ
ತಂದೆ ಮಕ್ಕಳ ನಡುವೆ
ವಿದ್ಯೆಯಿದೆ ಬುದ್ಧಿಯಿದೆ ಶಿಕ್ಷಕರಿಗೆ
ರಾಜಪ್ರಜೆಗಳ ನಡುವೆ ಪಿತೃವಾತ್ಸಲ್ಯವೇ
ಬೀಜ ಮಂತ್ರದ ಹಾಗೆ
ವ್ಯಾಪಾರ ತಕ್ಕಡಿಯ ಕಟ್ಟೆಯಲಿ ನ್ಯಾಯವಿದೆ
ನಿಮ್ಮ ದೇಗುಲಗಳಲ್ಲಿ ದೇವರಿದೆಯೆಂದು'

ಶಿವಪ್ರಕಾಶರ ಈ ನೆಲೆಯ ಆಸಕ್ತಿಗಳು ಅಡಿಗರನ್ನು ನೆನಪಿಸುತ್ತದೆ. 'ಕಟ್ಟುವೆವು ನಾವು ಹೊಸ ನಾಡೊಂದನ್ನು' ಎನ್ನುವ ಅವರು 'ಭ್ರಮೆ'ಯಿಂದ ಹೊರಬರುತ್ತಾರೆ. ನಾಡು ಕಟ್ಟುವ ಅಥವಾ ನಾಡು ಹೀಗಿದೆ ಎಂಬ ಚಿಂತನೆಗೆ ಮಾರ್ಕ್ಸ್ ಭಿನ್ನ ವಿಚಾರ ಮಂಡಿಸುತ್ತಾನೆ. 'ಇಲ್ಲಿನ ಸೌಧಗಳು, ಶ್ರೀಮಂತರು, ಶೋಷಣೆಯ ಆಯುಧಗಳು ನಾವು ಮಾಡಬೇಕಾಗಿರುವುದು ಅದಲ್ಲ ಸಮಾನ ಹಂಚಿಕೆ' ಎನ್ನುತ್ತಾನೆ. ಹೀಗಾಗಿ ಅಡಿಗರ ಭ್ರಮೆ ಇಲ್ಲಿ ಶಿವಪ್ರಕಾಶರ ಭ್ರಮೆ ಕೂಡ ಆದಗಿದೆ. ಮುಂದೆ ಕವಿ ಒಪ್ಪಿಕೊಳ್ಳುತ್ತಾನೆ.

ಈ ಪರಿಯ ಒಪ್ಪಿಗೆ ನವ್ಯ ಮನೋಭಾವದ ಒಂದು ಲಕ್ಷಣ. ಅಂದರೆ ಅದು ನಿರಾಸೆ. 'ತಂದೆ - ಮಕ್ಕಳ -ಶಿಕ್ಷಕರ -ರಾಜ- ಪ್ರಜೆಗಳ ನ್ಯಾಯಾಲಯ' ಎಲ್ಲೂ ಕೂಡ ನೈತಿಕತೆ ಇಲ್ಲ.

'ದೇಗುಲದಲ್ಲಿಂತು ದೇವರಿರಲಿಲ್ಲ'
ದೇವಲೋಕದ ಕನಸು ಕೊನೆಯಾಯಿತು

ನಿರಾಶೆಯ ಆರಂಭವನ್ನು ಇದು ಸೂಚಿಸುತ್ತದೆ. ನಾವು ಕಟ್ಟಿಕೊಂಡ ಕನಸಿನ ಗೂಡು ನಶಿಸಿದೆ. ನಮ್ಮ ಬದುಕಿನ ರಕ್ಷಣೆ ಆತಂಕದಿಂದ ಉಧ್ವಸ್ಥಗೊಂಡಿದೆ. ಅಸ್ತವ್ಯಸ್ತ ಕಲ್ಪನೆಗಳು ಕಾಡುತ್ತಿವೆ. ಈ ರೀತಿಯ ಗೊಂದಲಪುರದ ವ್ಯಕ್ತಿತ್ವಕ್ಕೆ —

೧

ಕುಕಿಲಿಡುವ ಹಕ್ಕಿಗಳ ಬಾಯ್ಮುಚ್ಚಿ
ಸೈರನ್ನು ಸೀಟಿಗಳ ಊದಿದಂದು
ಬಾಂಬುಷೆಲ್ಲಿನ ದೊಡ್ಡ ವೃಷ್ಟಿಯಾದಂದು?

೨

ನನ್ನ ಕವಿತೆಗಳೆಲ್ಲ ಮಾರುಕಟ್ಟೆಗಳಲ್ಲಿ
ದೇವಮೂರ್ತಿಗಳೊಡನೆ ಪ್ರೀತಿನೀತಿಗಳಂತೆ
ಬೇಡಿಕೆ ಸರಬರಾಜಿನ ಸೂತ್ರದನ್ವಯ
ಲಾರಿಯಿಂದಿಳಿದು ಗೋಡನ್ನಿನಲ್ಲಿ
ತ್ರಾಸು ತಟ್ಟೆಗಳಲ್ಲಿ ತೂಗಿದಾಗ?

೩

ಚಾಕು ಚೂರಿಗಳಿಂದ ಕೆಂಪು ಗೀಟೆಳೆದು
ನೀವು ನೀವೆ ಸೇರಿ ಹಂಚಿಕೊಂಡಾಗ
ಎಲ್ಲಿತ್ತು ರಕ್ಷಣೆ ಲೋಕದೊಳಗೆ?
ಏನುಳಿಯಿತು ನನಗೆ? ಉಳಿದುದೇನು?

ಕವಿ ವಿಫಲಗೊಂಡಿದ್ದಾನೆ. ತನ್ನ ನಿರೀಕ್ಷೆ ಜಡ್ಡುಗಟ್ಟಿದ ಅನುಭವ ಬಯಕೆಯ ಬಿಂಬಗಳು ಬಯಲಾಗದೆ ಕರಗಿದ ಚಿಂತೆ ಹತಾಶನನ್ನಾಗಿ ಈ ಮಾತುಗಳನ್ನು ಆಡುತ್ತಾನೆ. ಸ್ವತಂತ್ರ್ಯಾನಂತರದ ಭಾರತದ ಸ್ಥಿತಿಯ ವಿಶ್ಲೇಷಣೆ ಈ ಸಾಲುಗಳಲ್ಲಿ ಕಾಣಬಹುದು. ಗಾಂಧಿಯ ಕನಸಿನ ಆದರ್ಶಗಳು ನೆಲೆ ಕಾಣಲೇ ಇಲ್ಲ. ಆದರೆ ಆಧುನಿಕತೆಯ ಪ್ರತಿನಿಧಿ ನೆಹರೂ ಇಲ್ಲಿ ಇನ್ನೂ ಉಳಿದಿದ್ದಾರೆ. ನಾವು ಯಾವ ದಿಕ್ಕಿನ ಆದರ್ಶಕ್ಕೆ ತಲೆಬಾಗಿದ್ದೇವೆ. ಇಲ್ಲಿನ ಯಾವ ನೋವು ಅಂತ್ಯಗೊಂಡಿದೆ. ಅದೇ ರೀತಿ ಯಾರು ನಮ್ಮನ್ನು ಬಡತನವಿಲ್ಲದ, ಹಸಿವಿಲ್ಲದ, ನೋವಿರದ ರೀತಿಯಲ್ಲಿ ನೋಡಿದ್ದಾರೆ. ಎಲ್ಲವೂ ಇಲ್ಲಿ 'ತಾಯ್ಗಂಡ' ಸ್ಥಿತಿಗೆ ತಲುಪಿ ಬಿಟ್ಟಿದೆ. ಗಾಂಧಿ ಪ್ರಣೀತ ಚಿಂತನೆಗಳು ಸಂಪುಟಗಳಲ್ಲೇ ಅಡಗಿವೆ. ಎಲ್ಲವೂ ಅಯೋಮಯವಾಗಿ 'ಭಾರತ ಬಿಕರಿ'ಗಿದೆ ಎಂಬ ಬೋರ್ಡ್‌ಗಳು ರಾರಾಜಿಸುವ ದಿನಗಳು ಹತ್ತಿರವಾಗುತ್ತಿವೆ. ನಮ್ಮ ಕನಸುಗಳನ್ನು ಕಸಿದುಕೊಂಡ ಈ ಪರಿಸ್ಥಿತಿ ನಮ್ಮ ಕೂಸುಗಳಿಗೆ –

'ಹೂವು ಕೀಳದ ಕೈಗೆ ಕೋವಿ ಬಂತು
ತೆವಳುತ್ತಿದ್ದೀ ಹಾವು ಹೆಡೆಯೆತ್ತಿತು'

ಎಲ್ಲವೂ ಭಯೋತ್ಪನ್ನದ ಸ್ಥಿತಿಗೆ ತಲುಪಿಬಿಟ್ಟಿದೆ. ನಮ್ಮ ದೇಹವೇ ದ್ವೇಷೋತ್ಪಾದನೆಯ ಕೈಗಾರಿಕೆಯಾಗಿದೆ. ಇಲ್ಲಿನ ನಿದ್ದೆಯಿರದ ಕಣ್ಣುಗಳಿಗೆ ಲಾಳ ಹಾಕಿ ಬಿಗಿದುಬಿಟ್ಟಿದ್ದೇವೆ. ಹೀಗಾಗಿ ಕವಿಗೆ ಇಲ್ಲಿನ ಜನರ ಮೇಲೆ ಭರವಸೆಗಳಿಲ್ಲ. ಆ ಕಾರಣಕ್ಕೆ 'ಮತ್ತೆ ಮತ್ತೆ' ಅನುಭಾವಿ ಲೋಕದೊಳಗೆ ಅವರು ಪ್ರವೇಶಿಸುತ್ತಾರೆ. ಆದರೆ ಅದು ಸಾರ್ವತ್ರಿಕಗೊಳ್ಳದೆ ಹೆಡೆ ಎತ್ತದ ಹಾವಾಗಿ ಹುತ್ತ ಸೇರಿಬಿಟ್ಟಿದೆ. ಆದರೂ ಕವಿ ಇಂಥ ಭ್ರಮಾತ್ಮಕ ನಿದ್ರೆಗೆ ವಿರಾಮ ಕೊಡಬೇಕು ಎನ್ನುತ್ತಾರೆ.

'ಈ ಸಾವಿನಿಂದೆದ್ದು
ಬಂದ ಎಲ್ಲೋ ಕೆಲವು
ಮರುಹುಟ್ಟು ಪಡೆದವರ ಪಡೆಯ ಕಟ್ಟಿ'

ಎಂದು ಅಲವತ್ತುಗೊಳ್ಳುತ್ತಾರೆ. ಈ ರೀತಿಯ ಬಯಕೆ ಕಾವ್ಯ ಜಗತ್ತಿನಲ್ಲಿ ಸರ್ವೇಸಾಮಾನ್ಯ. ಆದರೆ ಕವಿಗೆ ಇಲ್ಲಿನ ಸೌಧಗಳನ್ನು ಮೂರ್ತಿಗಳನ್ನು ಕೆಡವುವ ತುರ್ತು ಇದೆ. ಅದು ರಾಜಕೀಯಗೊಳ್ಳದ ನಿಷ್ಕಲ್ಮಶ ನೆಲೆಯಿಂದ ಎಂಬುದು ಮುಖ್ಯ. ಹಾಗೆಯೇ ಕವಿ ಹೇಳಿದಂತೆ 'ನನ್ನ ಮಟ್ಟಿಗೆ ಕವಿತೆಗಳ ಅಸಲು ಜರೂರಿ ಮಾನವೀಯ' ಎಂಬುದು ಈ ಕವನದಲ್ಲಿ ಬೆರೆತುಕೊಂಡಿದೆ. ಹೀಗಾಗಿ ಬುದ್ಧನ ಚೈತನ್ಯಕ್ಕೆ ಮನಸೋತ ಶಿವಪ್ರಕಾಶ ಅದಕ್ಕೂ ಭಿನ್ನವಾಗಿ ಚಿಂತಿಸಿದವರು. ತಾವೊಂದು ನಿಲ್ಲದ ನದಿಯಾಗಿ ಹರಿದವರು. ಹೀಗಾಗಿ ಈ ಕಾವ್ಯ ಕೂಡ ಆಶಾವಾದವನ್ನು ಸೂಚಿಸುತ್ತದೆ. ಬದುಕಿನ ಅನಂತ ವಕಾಲತ್ತುಗಳನ್ನು ತಾವು ಬಳಸಿದರೂ 'ತಾವೇ' ಒಂದು ಪಾತ್ರವಾಗಬೇಕೆಂದು ಬಯಸದೆ ದೂರವೇ ಉಳಿಯುವುದು ಈ ಕವಿಯ ವೈಶಿಷ್ಟ್ಯ. ಈ ನೆಲೆಯಿಂದ ನೋಡಿದಾಗ ಕಾವ್ಯದ ಒಟ್ಟು ಕಾರ್ಯ 'ಮಾನವೀಯ ಮಿಲನ'ಕ್ಕೆ ಇಲ್ಲಿ ಅವಕಾಶ ಇದೆ. ಕೆಡವುವ ಕಾರ್ಯದಲ್ಲಿ ಆಧುನಿಕ ಭ್ರಮೆಯಿರದ 'ದೇಸಿ'ಯ ಜಾನಪದ ತಗುಲಿಕೊಂಡಿದೆ.

ಶಿವಪ್ರಕಾಶರ ಜೀವನ ಕ್ರಮ, ಚಿಂತಿಸುವ ದಿಕ್ಕು ಈ ನೆಲದಿಂದಲೇ ರೂಪುಗೊಂಡದ್ದು. ಹಾಗೆಯೇ ಇಲ್ಲಿರುವ ಎಲ್ಲವೂ ಶ್ರೇಷ್ಠ ಎಂಬುದನ್ನು ಒಪ್ಪದ ಮನೋಭಾವ ಕೂಡ ಇದೆ. ಆಧುನಿಕ ಭ್ರಮೆ ಕಳಚಿಕೊಂಡು ಭಕ್ತಿ ಮತ್ತು ಅನುಭಾವಿ ನೆಲೆಗೆ ಹಾತೊರೆವ ಕವಿಯ ಮನಸ್ಸು ಇನ್ನಷ್ಟು ಕಾವ್ಯವನ್ನು ಕೊಡುವಂತಾಗಲಿ.

ನುಡಿದರೆ ನುಡಿಗೆಟ್ಟು ನುಡಿಯಬೇಕು
ನಡೆದರೆ ನಡೆಗೆಟ್ಟು ನಡೆಯಬೇಕು.
– ಅಲ್ಲಮ.

---

ಕೇರಾಫ್ ಜಯಂತಿ, ಸಿ-೬, ಪೊಲೀಸ್ ಕ್ವಾರ್ಟರ್ಸ್
ಮಿಲ್ಲರ್ಸ್ ರಸ್ತೆ, ವಸಂತ ನಗರ, ಬೆಂಗಳೂರು-೫೬೦ ೦೫೨

# ಐಟಿ ಉದ್ಯಮ ಮತ್ತು ಕರ್ನಾಟಕ
## ಸಾಧಕ–ಬಾಧಕಗಳು

◆ ಬಿ. ಇಂದಿರಾ

**ಬೆಂ**ಗಳೂರು ನಗರದಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರಕ್ಕೆ ವಿದ್ಯುತ್, ದೂರವಾಣಿ ಸಂಪರ್ಕ, ನೀರು, ಸುಸಜ್ಜಿತ ಐಟಿ ಪಾರ್ಕ್ ಮೊದಲಾದ ಮೂಲ ಸೌಲಭ್ಯಗಳು ಹೇರಳವಾಗಿವೆ. ರಸ್ತೆ ಸಂಪರ್ಕ ಮತ್ತು ವಾಹನ ದಟ್ಟಣೆಯೊಂದೇ ಸಮಸ್ಯೆಯಾಗಿದೆ. ಅದಕ್ಕೆ ಬೆಂಗಳೂರಿನ ಮೂಲ ಸೌಕರ್ಯಗಳ ವಿಷಯದಲ್ಲಿ ರಾಜ್ಯ ಸರ್ಕಾರ ನಿರಾಸಕ್ತಿ ತಾಳಿದೆ ಎಂದು ಆರೋಪಿಸಿ ಕೆಲವು ಐಟಿ ಸಂಸ್ಥೆಗಳು ೨೦೦೫ರ ಅಕ್ಟೋಬರ್ ೨೬ರಿಂದ ನಡೆದ ಐಟಿ ಮೇಳವನ್ನು ಬಹಿಷ್ಕರಿಸಿ ನಂತರ ವಾಪಸ್ಸು ತೆಗೆದುಕೊಂಡಿದ್ದು ಈಗ ಇತಿಹಾಸ. ಐಟಿ ಉದ್ಯಮದ ವಹಿವಾಟು ಹೆಚ್ಚಾಗುವುದಕ್ಕೆ ಈ ಮೇಳ ವೇದಿಕೆ ಒದಗಿಸಿದೆ.

ಬೆಂಗಳೂರಿನಲ್ಲಿ ಮೂಲ ಸೌಕರ್ಯ ಕಲ್ಪಿಸುವುದು ಎಷ್ಟು ಮುಖ್ಯವೋ ಐಟಿ ಮತ್ತಿತರ ಉದ್ದಿಮೆಗಳಲ್ಲಿ ಕನ್ನಡಿಗರಿಗೆ ಉದ್ಯೋಗ ನೀಡುವುದೂ ಅಷ್ಟೇ ಮುಖ್ಯ ಎಂಬುದನ್ನು ಐಟಿ ಉದ್ದಿಮೆದಾರರು ಅರ್ಥ ಮಾಡಿಕೊಳ್ಳಬೇಕು.

ವಿಪರೀತ ಜನಸಂಖ್ಯೆಯ ಹೆಚ್ಚಳದಿಂದ ನಗರದಲ್ಲಿ ವಾಹನದಟ್ಟಣೆ ಹೆಚ್ಚಿರುವುದು ನಿಜ. ಇದನ್ನೇ ನೆಪವಾಗಿಟ್ಟುಕೊಂಡು ಐಟಿ ದೊರೆಗಳು ದರ್ಬಾರು ನಡೆಸುವುದು ಸರಿಯಲ್ಲ. ಎಲ್ಲಾ ಉದ್ದಿಮೆದಾರರು ಮತ್ತು ಕೈಗಾರಿಕಾ ಸಂಘ ಸಂಸ್ಥೆಗಳು ಕರ್ನಾಟಕದೊಂದಿಗೆ ಸಹಕರಿಸಬೇಕು. ತಾವು ಆಕಾಶದಲ್ಲಿ ನಡೆಯುವವರು ಎಂಬ ಭ್ರಮೆ ಬೇಡ.

ಮಾಹಿತಿ ತಂತ್ರಜ್ಞಾನ ರಂಗದಲ್ಲಿ ಭಾರೀ ಕ್ರಾಂತಿ ಆಗುತ್ತಿದೆ ಎಂಬುದು ನಿಜ. ಆದರೂ ಒಂದು ಪರಮಾಣು ಸ್ಥಾವರದ ಬಳಿ, ಸಾಲುಗಟ್ಟಿ ನಿಂತ ಅಣೆಕಟ್ಟುಗಳ ಬಳಿ, ನೌಕಾ ನೆಲೆಯ ಹೆಲಿಕಾಪ್ಟರ್ ಬಿದ್ದರೆ ಕೆಲವು ದಿನಗಳ ಕಾಲ ಅದು ಎಲ್ಲಿ ಬಿತ್ತೆಂಬುದೇ ಪತ್ತೆ ಆಗಿರುವುದಿಲ್ಲ. ಸುಭದ್ರತೆ ಎಂದರೆ ಇದೇನಾ? ಎಂಬ ಪ್ರಶ್ನೆ ಏಳುವುದು ಸಹಜ. ಮಾಹಿತಿ ಕ್ರಾಂತಿಯ ಮಾತೆಲ್ಲ ಕುಂಟು ಕುದುರೆಯ ಕತೆಯಂತಾದರೆ ಕಷ್ಟ ಏನು ಲಾಭ?

ಮೂಲ ಸೌಕರ್ಯಗಳನ್ನು ಕೇಳುವುದು ತಮ್ಮ ಹಕ್ಕು ಎಂದು ಅಬ್ಬರಿಸುವ ಮಾಹಿತಿ ತಂತ್ರಜ್ಞಾನ ಕ್ಷೇತ್ರದ 'ಸರ'ಗಳು ಮತ್ತು 'ಗುರು'ಗಳು ೧೯೯೧-೯೨ರಲ್ಲಿ ಕೇವಲ ೧೩ ಮಾಹಿತಿ ತಂತ್ರಜ್ಞಾನ ಸಂಸ್ಥೆಗಳಿದ್ದುದನ್ನು ಮರೆಯಬಾರದು. ಈಗ ೧೭೦೦ಕ್ಕೂ ಮಿಕ್ಕು ಸಂಸ್ಥೆಗಳಿರುವುದನು ದೇಶದ ತಂತ್ರಾಂಶ ರಫ್ತು ವಹಿವಾಟಿನಲ್ಲಿ ಇವುಗಳ ಪಾಲು ಶೇ. ೪೦ರಷ್ಟು ಆಗಿರುವುದು ಹೇಗೆ ಸಾಧ್ಯವಾಯಿತು ಎಂಬುದನ್ನು ತಿಳಿಯಬೇಕು. ಈ ಪ್ರಶ್ನೆಗೆ ಉತ್ತರ ಕೊಡುವ ಎದೆಗಾರಿಕೆ ತೋರಿಸಬೇಕು. ತಮ್ಮ ಅಳಲನ್ನು ಯಾರೂ ಕೇಳುತ್ತಿಲ್ಲ ಎನ್ನುವುದು ನಿಜವಾದರೆ ಮಾಹಿತಿ ತಂತ್ರಜ್ಞಾನೋದ್ಯಮದಲ್ಲಿ ಬೆಳವಣಿಗೆ ಈ ೧೦-೧೨ ವರ್ಷಗಳಲ್ಲಿ ಈ ಮಟ್ಟದಲ್ಲಿ ವೃದ್ಧಿಯಾಗುವುದು ಸಾಧ್ಯವಾಗುತ್ತಿರಲಿಲ್ಲ. ಸರ್ಕಾರ ಹತ್ತು ವರ್ಷಗಳ ತೆರಿಗೆ ರಿಯಾಯಿತಿ ದರದಲ್ಲಿ ಭೂಮಿ ಒದಗಿಸಿದ್ದು, ತಂತ್ರಜ್ಞಾನ ವಲಯಗಳು, ತಾಂತ್ರಿಕ ಕಾಲೇಜುಗಳನ್ನು ಸ್ಥಾಪಿಸಿದ್ದು ಇತ್ಯಾದಿಗಳನ್ನು ಕೊಡುಗೆಯಾಗಿ ನೀಡಿ ಮಣೆ ಹಾಕಿದ್ದು ಅವರಿಗೆ ಸಾಧಕವಾಗಿರುವುದು ನಿಕೃಷ್ಟವಾಗಿ ಕಾಣಬಾರದು.

ಕರ್ನಾಟಕದಲ್ಲಿ ತಳವೂರಲು ಇವರಿಗೆ ಆಸ್ಪದವಿರಬೇಕು. ಆದರೆ ಕನ್ನಡಿಗರ ಬಗ್ಗೆ ಇವರಿಗೆ ಅಸಡ್ಡೆ. ತಂತ್ರಜ್ಞಾನ ಸಂಸ್ಥೆಗಳವರು ಕನ್ನಡಿಗರಿಗೆ ಕೆಲಸ ಕೊಟ್ಟಿರುವ ಶೇಕಡಾಂಶ ಕಡಿಮೆ. ಒಂದಷ್ಟು ರಸ್ತೆಗಳು ಹಾಗೂ ಹತ್ತು ಹನ್ನೆರಡು ಚದರ ಕಿಲೋಮೀಟರುಗಳಷ್ಟು ಇರುವ ತಂತ್ರಜ್ಞಾನ ಕ್ಷೇತ್ರವೇ ಇಡಿಯ ಬೆಂಗಳೂರಲ್ಲ. ಕರ್ನಾಟಕವಂತೂ ಅಲ್ಲ. ಇವರುಗಳು ಇನ್ನಾದರೂ ಮನೆಗೆ ಮಾರಿಗಳಾಗದಿರಲಿ. ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗುವಂತೆ ನಡೆದುಕೊಳ್ಳಲಿ.

ಐಟಿ ಕಂಪನಿಗಳು ಮಾನವ ಸಂಪನ್ಮೂಲ ಮುಖ್ಯವೋ ಅಥವಾ ತಮ್ಮ ಕಾರುಗಳಿಗೆ ತಡೆರಹಿತ ಸಂಚಾರ ವ್ಯವಸ್ಥೆ ಕಲ್ಪಿಸಬೇಕೆಂಬ ಆಶಯವೋ ಅವರೇ ಸ್ಪಷ್ಟಪಡಿಸಬೇಕಾಗುತ್ತದೆ.

ರಾಜ್ಯದಿಂದ ರಫ್ತಾಗುವ ೬೮,೦೦೦ ಕೋಟಿ ರೂಪಾಯಿ ಮೊತ್ತದ ಉತ್ಪನ್ನಗಳ ಪೈಕಿ ೪೨ ಸಾವಿರ ಕೋಟಿ ರೂಪಾಯಿ ಅನ್ಯ ವಲಯಗಳಿಗೆ ಸೇರಿದೆ. ಇದನ್ನು ಐಟಿ ಕಂಪನಿಗಳು ಅರ್ಥ ಮಾಡಿಕೊಳ್ಳಬೇಕು.

ರಾಜ್ಯದಲ್ಲಿ ೨೦ ಲಕ್ಷ ಜನ ಉದ್ಯೋಗವನ್ನು ಅವಲಂಬಿಸಿರುವ ೧೨ ಸಾವಿರ ಸಣ್ಣ ಕೈಗಾರಿಕೆಗಳಿಗೆ ಸರ್ಕಾರ ತೆರಿಗೆಯಿಂದ ವಿನಾಯಿತಿ ನೀಡಿಲ್ಲ. ಆದರೆ ಐಟಿ ಕಂಪನಿಗಳಿಗೆ ೧೦ ವರ್ಷಗಳ ಕಾಲ ತೆರಿಗೆ ವಿನಾಯಿತಿ ನೀಡಿರುವುದು ದುರದೃಷ್ಟಕರ.

ರಾಜಧಾನಿಯಲ್ಲಿ ಐಟಿ ಕಂಪನಿಗಳು ತಲೆ ಎತ್ತಲು ಜನ ಸಾಮಾನ್ಯರು ನೀಡಿದ ಸಹಕಾರವೇ ಮೂಲ ಬಂಡವಾಳ. ಬೇರೆ ಭಾಷೆಯ ಎಂಜಿನಿಯರ್‌ಗಳು ಲಕ್ಷಾಂತರ ರೂಪಾಯಿ ಸಂಪಾದಿಸಿದರೂ ಸ್ಥಳೀಯರು ಯಾರೂ ಅವರ ಮೇಲೆ ದೌರ್ಜನ್ಯ ನಡೆಸಿಲ್ಲ ಎಂಬುದನ್ನು ಐಟಿ ನಾಯಕರು ಮನಗಾಣಬೇಕು.

ಈ ಔದಾರ್ಯ ಬೇರೆ ರಾಜ್ಯದಲ್ಲಿ ಎಲ್ಲೂ ಇಲ್ಲ ಎಂಬುದು ಅವರಿಗೂ ಗೊತ್ತಿದೆ. ಆದ್ದರಿಂದಲೇ ಅವರು ಆಂಧ್ರ ಸೇರಿದಂತೆ ಎಲ್ಲ ರಾಜ್ಯಗಳ ಮುಖ್ಯಮಂತ್ರಿಗಳು ಬಂದು ರತ್ನಗಂಬಳಿ ಹಾಸಿ ಕರೆದರೂ

ಬೆಂಗಳೂರು ಬಿಟ್ಟುಹೋಗುವ ಮನಸ್ಸು ಮಾಡಲಿಲ್ಲ.

ಉದ್ಯಾನವನಗಳ ನಗರವಾಗಿದ್ದ ಬೆಂಗಳೂರನ್ನು ಸಿಲಿಕಾನ್ ವ್ಯಾಲಿಯಾಗಿ ಮಾಡಲು ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಕಾಲಕಾಲಕ್ಕೆ ಉತ್ತೇಜನ ನೀಡಿದವು. ಬೆಂಗಳೂರಿನ ಜನರಲ್ಲಿ ಮೊದಲಿನಿಂದಲೂ ವಿಜ್ಞಾನಿಗಳು ಹಾಗೂ ಎಂಜಿನಿಯರ್‌ಗಳೆಂದರೆ ಗೌರವ ಭಾವ. ಸರ್ ಎಂ. ವಿಶ್ವೇಶ್ವರಯ್ಯನವರನ್ನು ಮಂಡ್ಯದ ಜನ ದೇವರಂತೆ ಈಗಲೂ ಪೂಜಿಸುತ್ತಾರೆ. ೧೯೦೫ರಲ್ಲಿ ಶಿವನಸಮುದ್ರದಲ್ಲಿ ಜಲವಿದ್ಯುತ್ ಕೇಂದ್ರ ಆರಂಭಿಸಿದ್ದು ಮೈಸೂರು ಅರಸರು. ೧೯೧೧ರಲ್ಲಿ ಜೆಮ್‌ಶೆಡ್ ಜಿ. ಟಾಟಾ ಭಾರತೀಯ ವಿಜ್ಞಾನ ಸಂಸ್ಥೆಯನ್ನು ಆರಂಭಿಸಲು ನಾಲ್ವಡಿ ಕೃಷ್ಣರಾಜ ಒಡೆಯರ್ ಕಾರಣ. ಈ ಸಂಸ್ಥೆಯೊಂದಿಗೆ ಸರ್ ಸಿ.ವಿ. ರಾಮನ್, ಹೋಮಿ ಭಾಬಾ, ವಿಕ್ರಂ ಸಾರಾಭಾಯ್, ಸತೀಶ್ ಧವನ್, ಸಿ.ಎನ್.ಆರ್. ರಾವ್ ಸೇರಿದಂತೆ ದಿಗ್ಗಜರ ಸಂಪರ್ಕ ಬೆಳೆದಿದ್ದರಿಂದ ಇಸ್ರೋ, ಎಚ್.ಎ.ಎಲ್., ಬಿ.ಇ.ಎಲ್., ಎನ್.ಎ.ಎಲ್. ಸಂಸ್ಥೆಗಳು ತಲೆ ಎತ್ತಿದವು. ಇದರೊಂದಿಗೆ ರಾಜ್ಯ ಸರ್ಕಾರ ೧೯೭೨ರಲ್ಲಿ ಖಾಸಗಿ ಎಂಜಿನಿಯರಿಂಗ್ ಕಾಲೇಜುಗಳ ಸ್ಥಾಪನೆಗೆ ನೀಡಿದ ಉತ್ತೇಜನ ಇಂದಿನ ಬೃಹತ್ ಬೆಳವಣಿಗೆಗೆ ಕಾರಣ. ಮಾನವ ಸಂಪನ್ಮೂಲ ಬೆಳವಣಿಗೆ ಒಂದು ದಿನದಲ್ಲಿ ಆಗುವ ಕೆಲಸವಲ್ಲ.

ಈ ಎಲ್ಲ ಹಿನ್ನೆಲೆಯಲ್ಲಿ ಐಟಿ ಜಗತ್ತಿನ ಬೆಳವಣಿಗೆ ಹಾಗೂ ಇಲ್ಲಿನ ಸರಕಾರದ, ಜನರ ಬೆಂಬಲವನ್ನು ಗಮನಿಸುವುದೊಳಿತು. ಮೊಧಲ ಕಂಪ್ಯೂಟರ್ ಕಾಣಿಸಿಕೊಂಡಿದ್ದು ೧೯೪೫ರಲ್ಲಿ ಅಮೆರಿಕದಲ್ಲಿ. ಭಾರತದಲ್ಲಿ ಕಂಪ್ಯೂಟರ್ ಕಾಲಿಟ್ಟದ್ದು ಕೊಲ್ಕತ್ತದಲ್ಲಿ. ೧೯೭೨ರ ವೇಳೆಗೆ ೧೭೨ ಕಂಪ್ಯೂಟರ್‌ಗಳು ದೇಶದಲ್ಲಿದ್ದವು. ೧೯೮೦ರಲ್ಲಿ ಕೇಂದ್ರ ಸರಕಾರ ದುಬಾರಿ ಆಮದು ಸುಂಕ ವಿಧಿಸಿದ್ದ ರಿಂದ ಕಂಪ್ಯೂಟರ್ ಮಾಹಿತಿ ಕೇಂದ್ರಗಳು ಆರಂಭವಾಗುವುದು ಕಷ್ಟವಾಯಿತು. ಐಬಿಎಂ ಸಂಸ್ಥೆಯನ್ನು ದೇಶದಿಂದ ಹೊರಹಾಕಲು ಕೇಂದ್ರ ಸರ್ಕಾರ ತೀರ್ಮಾನಿಸಿತು. ಇದರಿಂದ ವಿಪ್ರೋ ಕಂಪನಿ ಹೊರಬರಲು ಕಾರಣವಾಯಿತು.

೧೯೮೩ರಲ್ಲಿ ಎನ್.ಆರ್. ನಾರಾಯಣಮೂರ್ತಿ ಹಾಗೂ ಇತರ ೬ ಜನ ಇನ್ಫೋಸಿಸ್ ಟೆಕ್ನಾಲಜಿ ಸಂಸ್ಥೆಯನ್ನು ಪುಣೆಯಿಂದ ಬೆಂಗಳೂರಿಗೆ ಸ್ಥಳಾಂತರಿಸಿದರು. ಅವರ ಬೆನ್ನ ಹಿಂದೆಯೇ ಅಜೀಂ ಪ್ರೇಮ್‌ಜಿ ವಿಪ್ರೋ ಕಂಪನಿಯನ್ನು ಆರಂಭಿಸಿದರು. ೧೯೮೬ರಲ್ಲಿ ಟೆಕ್ಸಾಸ್ ಇನ್‌ಸ್ಟ್ರುಮೆಂಟ್ಸ್ ಸಂಸ್ಥೆ ಸೆಮಿಕಂಡಕ್ಟರ್ ತಯಾರಿಕೆಗೆ ಕಂಪ್ಯೂಟರ್ ಆಧರಿತ ವಿನ್ಯಾಸ ಕೇಂದ್ರವನ್ನು ಸ್ಥಾಪಿಸಿತು. ಇದು ಮಾಹಿತಿ ತಂತ್ರಜ್ಞಾನ ರಂಗದಲ್ಲಿ ಹೊಸ ಅಧ್ಯಾಯವನ್ನು ತೆರೆಯಿತು. ಟೆಕ್ಸಾಸ್ ಸಂಸ್ಥೆ ಅಧಿಕಾರಿಗಳು ಆಗಿನ ಪ್ರಧಾನಿ ರಾಜೀವಗಾಂಧಿಯವರನ್ನು ಸಂಪರ್ಕಿಸಿದರು. ಎಲೆಕ್ಟ್ರಾನಿಕ್ ರಂಗದ ಮೇಲಿದ್ದ ಎಲ್ಲ ನಿರ್ಬಂಧ ರದ್ದಾಯಿತು. ಅಲ್ಲದೆ ಟೆಕ್ಸಾಸ್ ಸಂಸ್ಥೆಯವರು ದೇಶವೆಲ್ಲಾ ಸುತ್ತಾಡಿ ಬೆಂಗಳೂರನ್ನು ಆಯ್ಕೆ ಮಾಡಿಕೊಂಡರು. ಅವರು ೬೪ ಕೆ.ಬಿ. ಕಂಪ್ಯೂಟರ್ ಸಂಪರ್ಕ ಕೇಳಿದಾಗ ಕೇಂದ್ರ ಸರ್ಕಾರದವರು ಇವರನ್ನು ಸಿಐಎ ಏಜೆಂಟರು ಎಂದು ಶಂಕಿಸಿದರು. ಆದರೆ ಟೆಕ್ಸಾಸ್ ಮಾಡಿದ ಸಾಧನೆ ೩ ಎಂ.ಎಚ್.ಪಿ. ಮೋಟರೋಲ ಕಂಪನಿಗಳು ಬೆಂಗಳೂರಿಗೆ ಬರಲು ಕಾರಣವಾಯಿತು.

೧೯೮೯ರಲ್ಲಿ ರಾಜೀವ ಗಾಂಧಿ ಸಾಫ್ಟ್‌ವೇರ್ ಮೇಲಿದ್ದ ಆಮದು ಸುಂಕವನ್ನು ರದ್ದುಪಡಿಸಿದ್ದಲ್ಲದೆ, ಕಂಪನಿಗಳು ರಫ್ತಿನಿಂದ ಗಳಿಸುವ ಲಾಭದ ಮೇಲೆ ಯಾವುದೇ ತೆರಿಗೆ ಇಲ್ಲ ಎಂದು ಘೋಷಿಸಿದರು. ಇದು ಕಂಪನಿಗಳ ಬೆಳವಣಿಗೆಗೆ ಕಾರಣವಾಯಿತು. ೧೯೭೧ರಲ್ಲಿ ಕರ್ನಾಟಕ ಸರ್ಕಾರ ಕಂಪ್ಯೂಟರ್ ಕೇಂದ್ರ ಸ್ಥಾಪಿಸಿತು. ೧೯೮೫ರಲ್ಲಿ ೩೩೦ ಎಕರೆಯಲ್ಲಿ ಎಲೆಕ್ಟ್ರಾನಿಕ್ ಸಿಟಿ ಆರಂಭಿಸಿ ಐಟಿ ಕಂಪನಿಗಳಿಗೆ ನಿವೇಶನ ನೀಡಿತು. ಇದರೊಂದಿಗೆ ಮತ್ತೆ ೩.೦೩ ಎಕರೆಗಳನ್ನು ಎರಡನೇ ಹಂತದ ಎಲೆಕ್ಟ್ರಾನಿಕ್ ಸಿಟಿ

ಸ್ಥಾಪನೆಗೆ ನೀಡಿತು. ಪರಿಣಾಮ ಈಗ ಈ ನಿವೇಶನಗಳಿಗೆ ಚಿನ್ನದ ಬೆಲೆ ಬಂದಿದೆ.

ದೇಶದಲ್ಲೇ ಮೊದಲ ಬಾರಿಗೆ ವೈಟ್‌ಫೀಲ್ಡ್‌ನಲ್ಲಿ ಟಾಟಾ ಸಮುಚ್ಚಯದೊಂದಿಗೆ ಸಿಂಗಾಪುರ ಕಂಪನಿಗಳ ನೆರವಿನೊಂದಿಗೆ ರಾಜ್ಯ ಸರ್ಕಾರ ಐಟಿಪಿಎಲ್ ಸ್ಥಾಪಿಸಿತು. ೧೯೮೬ರಲ್ಲಿ ರಾಜ್ಯ ಸರಕಾರ ಹೊಸ ಕೈಗಾರಿಕಾ ನೀತಿ ಪ್ರಕಟಿಸಿ ಉತ್ತೇಜನ ನೀಡಿತು. ೧೯೯೭ರಲ್ಲಿ ಐಟಿ ನೀತಿ ಪ್ರಕಟಿಸಿತು. ಪ್ರತಿ ವರ್ಷ ಐಟಿ ಮೇಳ ನಡೆಸಲು ಕಾರಣವಾಯಿತು.

ಐಟಿ ಸೇರಿದಂತೆ ಎಲ್ಲ ಖಾಸಗಿ ಕಂಪನಿಗಳ ಸಾಮಾಜಿಕ ಹೊಣೆ ನಿಗದಿಪಡಿಸಲು ಪ್ರತ್ಯೇಕ ಶಾಸನ ಜಾರಿಗೆ ತರುವುದರ ಕುರಿತು ಸಾರ್ವಜನಿಕ ಚರ್ಚೆ ನಡೆಯಬೇಕೆಂದು ಬೆಲ್ಜಿಯಂ ಟ್ರೇಡ್ ಕಮಿಷನರ್ ಜಯಂತ ನಾಡಿಗೇರ್ ಹೇಳಿದ್ದಾರೆ.

ಸರಕಾರ ಪ್ರತಿ ವರ್ಷ ಆಯವ್ಯಯದಲ್ಲಿ ತಾನು ಕೈಗೊಳ್ಳಲಿರುವ ಕಾಮಗಾರಿಗಳನ್ನು ಹೆಸರಿಸಿ, ಖಾಸಗಿ ಕಂಪನಿಗಳು ಯಾವ ಕ್ಷೇತ್ರದಲ್ಲಿ ಪಾಲ್ಗೊಳ್ಳಬೇಕೆಂಬುದನ್ನು ಸ್ಪಷ್ಟಪಡಿಸಬೇಕು. ಇದರಿಂದ ಸರಕಾರ ಹಾಗೂ ಖಾಸಗಿ ಕಂಪನಿಗಳಿಗೆ ತಮ್ಮ ಸಂಪನ್ಮೂಲ ಕ್ರೋಢೀಕರಿಸಿಕೊಳ್ಳಲು ಅನುಕೂಲವಾಗಲಿದೆ ಎಂದು ತಿಳಿಸಿರುವರು.

ಈಗ ಖಾಸಗಿ ಕಂಪನಿಗಳು ತಮಗೆ ಆಸಕ್ತಿ ಇರುವ ಕ್ಷೇತ್ರದಲ್ಲಿ ನೆರವು ನೀಡುತ್ತಿವೆ. ಶಿಕ್ಷಣ ಮತ್ತು ಆರೋಗ್ಯಕ್ಷೇತ್ರದಲ್ಲಿ ಹೆಚ್ಚು ತೊಡಗಿಸಿಕೊಂಡಿವೆ. ಇದರಿಂದ ಬದಲಾವಣೆ ಕಾಣಲು ಸಾಧ್ಯವಾಗಿದೆ. ಈ ರೀತಿ ಖಾಸಗಿ ಕಂಪನಿಗಳು ಪಾಲ್ಗೊಳ್ಳಬಹುದಾದ ಕಾಮಗಾರಿಗಳನ್ನು ಗುರುತಿಸಿ, ಅವುಗಳನ್ನು ಪೂರ್ಣ ಕಂಪನಿಗಳಿಗೇ ಒಪ್ಪಿಸುವುದು ಸೂಕ್ತ. ಇದರಿಂದ ಸಾರ್ವಜನಿಕ ಕೆಲಸಗಳು ತ್ವರಿತ ಗತಿಯಲ್ಲಿ ಪೂರ್ಣಗೊಳ್ಳಲು ಸಾಧ್ಯ. ಸರಕಾರ ಎಲ್ಲ ಕ್ಷೇತ್ರಗಳಲ್ಲಿ ಹಣ ತೊಡಗಿಸುವುದು ಕಷ್ಟ. ಪ್ರಗತಿಯ ವೇಗಕ್ಕೆ ಅನುಗುಣವಾಗಿ ಆರ್ಥಿಕ ಸಂಪನ್ಮೂಲ ಒದಗಿಸುವುದು ಸುಲಭದ ಕೆಲಸವಲ್ಲ. ಇದನ್ನು ಅರ್ಥಮಾಡಿಕೊಂಡು ಸರಕಾರ ಖಾಸಗಿ ಕಂಪನಿಗಳೊಂದಿಗೆ ನೇರ ಮಾತುಕತೆ ನಡೆಸುವುದು ಸೂಕ್ತ.

ಇದಕ್ಕಾಗಿ ಸಮನ್ವಯ ಅಧಿಕಾರಿಯನ್ನು ನೇಮಿಸಬೇಕು. ಅವರ ಮೂಲಕ ನಿರ್ದಿಷ್ಟ ಕಾಮಗಾರಿಗಳನ್ನು ಖಾಸಗಿ ಕಂಪನಿಗಳಿಗೆ ಒಪ್ಪಿಸಬೇಕು. ಇದಕ್ಕೆ ದೀರ್ಘಕಾಲಿಕ ವ್ಯವಸ್ಥೆ ಬೇಕು. ಇದರಿಂದ ರಾಜ್ಯದ ಸರ್ವತೋಮುಖ ಬೆಳವಣಿಗೆ ಸಾಧ್ಯ.

ಖಾಸಗಿ ಕಂಪನಿಗಳು ಸಹ ತಮ್ಮ ಕೈಲಾದ ನೆರವು ನೀಡುತ್ತ ಬಂದಿವೆ. ಬೆಂಗಳೂರಿನಲ್ಲಿ ಸ್ವಚ್ಛತೆ ಕಾಪಾಡಲು ಶೌಚಾಲಯಗಳನ್ನು ನಿರ್ಮಿಸಿವೆ. ಕೆಲವು ರಸ್ತೆಗಳಲ್ಲಿ ವೃತ್ತಗಳ ನಿರ್ವಹಣೆ, ಉದ್ಯಾನವನಗಳ ನವೀಕರಣ ಕಾರ್ಯ ಕೈಗೊಂಡಿವೆ. ಮತ್ತೆ ಕೆಲವು ಕಂಪನಿಗಳು ಉತ್ತರ ಕರ್ನಾಟಕದಲ್ಲಿ ಬಡ ಮಕ್ಕಳ ಶಿಕ್ಷಣ ಮಟ್ಟದ ಅಭಿವೃದ್ಧಿಗೆ ನೆರವು ನೀಡುತ್ತಿವೆ. ಸುನಾಮಿ ದುರಂತದ ಸಂದರ್ಭದಲ್ಲಿ ಶಾಶ್ವತ ಪರಿಹಾರ ಕಾಮಗಾರಿಗಳಿಗೆ ನೆರವು ನೀಡಿವೆ. ನೆರವು ನೀಡುವುದಕ್ಕೆ ಕಂಪನಿಗಳು ಹಿಂಜರಿಯುವುದಿಲ್ಲ. ಆದರೆ ನೀಡಿದ ನೆರವು ನೇರವಾಗಿ ಫಲಾನುಭವಿಗಳನ್ನು ತಲುಪಬೇಕೆಂಬುದೇ ಅವರ ಅಭಿಲಾಷೆ. ಎಷ್ಟೋ ವೇಳೆ ಅವು ನೈಜ ಫಲಾನುಭವಿಗಳನ್ನು ತಲುಪುವುದೇ ಇಲ್ಲ. ಇದು ಸಂದೇಹಕ್ಕೆ ಕಾರಣವಾಗುತ್ತದೆ. ಉತ್ತರ ಕರ್ನಾಟಕದಲ್ಲಿ ಪ್ರವಾಹದಿಂದ ನೊಂದವರ ಕಷ್ಟಗಳನ್ನು ಕಂಪನಿಗಳಿಗೆ ಮನವರಿಗೆ ಮಾಡಿಕೊಟ್ಟರೆ ನೆರವು ನೀಡಲು ಹಿಂಜರಿಯುವುದಿಲ್ಲ.

ಸರಕಾರ ಪ್ರವಾಹ ಪರಿಹಾರ ಕಾಮಗಾರಿಯನ್ನು ತಾನು ಕೈಗೊಂಡು ಉಳಿದ ಕಾಮಗಾರಿಗಳನ್ನು ಖಾಸಗಿ ಕಂಪನಿಗಳಿಗೆ ಒಪ್ಪಿಸಬಹುದು.

ರಾಜ್ಯದ ಆರ್ಥಿಕ ಪ್ರಗತಿಗೆ ಐಟಿ ಕಂಪನಿಗಳ ಕೊಡುಗೆ ಇದೆ ಎಂಬುದರಲ್ಲಿ ಯಾವ ಸಂದೇಹವೂ

ಇಲ್ಲ. ವಿದ್ಯಾವಂತ ಯುವಕರಿಗೆ ಉದ್ಯೋಗ ನೀಡುವ ಶಕ್ತಿ ಸರ್ಕಾರಕ್ಕೆ ಈ ಪ್ರಮಾಣದಲ್ಲಿರಲು ಸಾಧ್ಯವಿಲ್ಲ. ವಿದೇಶಿ ವಿನಿಮಯ ತಂದುಕೊಡುವ ಈ ಕಂಪನಿಗಳನ್ನು ಕಡೆಗಣಿಸುವಂತಿಲ್ಲ. ಅದರಲ್ಲೂ ಕೇಂದ್ರ ಸರ್ಕಾರ ನಿರ್ಲಕ್ಷ್ಯ ತೋರಲು ಬಯಸುವುದಿಲ್ಲ. ಐಟಿ ಕಂಪನಿ ಹಾಗೂ ಸರಕಾರಗಳೆರಡಕ್ಕೂ ಸಾಮಾಜಿಕ ಬದ್ಧತೆ ಬೇಕು. ಐಟಿ ಕಂಪನಿಯ ನಿಷ್ಠುರ ನಡವಳಿಕೆಯಿಂದ ಉಪಯೋಗವಿಲ್ಲ.

ರಸ್ತೆ ಸಂಚಾರ ನಿರ್ವಹಣೆಯಲ್ಲಿ ಸರ್ಕಾರವು ಐಟಿ ಕಂಪನಿಗಳ ನೆರವು ಪಡೆಯಬಹುದು. ರಸ್ತೆ ಬಳಕೆಯ ಬಗ್ಗೆ ಜನಸಾಮಾನ್ಯರಿಗೆ ತರಬೇತಿ ನೀಡುವುದರ ಅವಶ್ಯಕತೆ ಇದೆ.

ಐಟಿ ಉದ್ಯಮಿಗಳಿಗೆ ಅಗತ್ಯವಿರುವ ಜಮೀನು ಮಾರುವಾಗ ಆ ಜಮೀನು ಕಳೆದುಕೊಳ್ಳುವವರಿಗೆ ಉದ್ಯೋಗ ನೀಡುವಂತೆ ಷರತ್ತು ಹಾಕಬೇಕು ಮತ್ತು ಆ ಭೂಮಿಯನ್ನು ಯಾವ ಉದ್ದೇಶಕ್ಕೆ ಬಳಸಲಾಗುತ್ತದೆ ಎಂಬ ಬಗ್ಗೆ ಉನ್ನತಾಧಿಕಾರ ಸಮಿತಿಯಿಂದ ಪರಾಮರ್ಶೆಯಾಗಬೇಕು. ನಂತರ ಸಂಪುಟ ಸಮಿತಿಯಲ್ಲಿ ಒಪ್ಪಿಗೆ ಪಡೆದು ಭೂಮಿ ಮಂಜೂರು ಮಾಡಬೇಕು. ಭೂಮಿ ಕಳೆದುಕೊಂಡ ಸ್ಥಳೀಯರು ಬೀದಿಯಲ್ಲಿ ಅಲೆಯುವಂತಾಗಬಾರದು.

ಐಟಿ ಕಂಪನಿಗಳಿಗೆ ಭೂಮಿ ಮಂಜೂರು ಮಾಡುವ ಹೆಸರಿನಲ್ಲಿ ರೈತರು ಮತ್ತು ಬಡವರಿಂದ ಭೂಮಿ ಸ್ವಾಧೀನ ಪಡೆಯಲಾಗುತ್ತದೆ. ಆದರೆ ನಿರ್ದಿಷ್ಟ ಉದ್ದೇಶಕ್ಕೆ ಬಳಕೆ ಆಗುವುದಿಲ್ಲ ಎಂಬ ಆತಂಕದ ವಿಷಯ ವ್ಯಕ್ತವಾಗುತ್ತಿದೆ.

ಈ ಹಿನ್ನೆಲೆಯಲ್ಲಿ ಐಟಿ ಕಂಪನಿಗಳಿಗೆ ಭೂಮಿ ಮಂಜೂರು ಮಾಡಲು ನಿರ್ದಿಷ್ಟ ನಿಯಮಗಳನ್ನು ರೂಪಿಸಬೇಕು ಮತ್ತು ಅದನ್ನು ಸುಗ್ರೀವಾಜ್ಞೆ ರೂಪದಲ್ಲಿ ತರಬೇಕು.

ಸ್ಥಳೀಯರನ್ನು ನಿರ್ಲಕ್ಷಿಸಿ, ಯಾವುದೇ ಕಂಪನಿ ಅಭಿವೃದ್ಧಿ ಕಂಡರೆ ಅದು ಫಲಪ್ರದವಾಗದು ಎಂಬುದನ್ನು ಮನಗಾಣಬೇಕು. ಕನ್ನಡಿಗರಿಗೆ ಉದ್ಯೋಗ ನೀಡುವುದು ತಮ್ಮ ಆದ್ಯ ಕರ್ತವ್ಯವೆಂದು ಇತ್ತೀಚೆಗೆ ಬಯೋಕಾನ್ ಅಧ್ಯಕ್ಷೆ ಕಿರಣ್ ಮುಜುಂದಾರ್ ಷಾ ತಿಳಿಸಿರುವುದು ಆಶಾದಾಯಕ ಅಂಶ.

ಐಟಿ ಕ್ಷೇತ್ರದಿಂದ ರಾಜ್ಯದ ಆರ್ಥಿಕ ನೆಲೆಗಟ್ಟು ವಿಸ್ತಾರವಾಗಿದೆ ಎಂಬುದು ನಿಜವಾದರೂ, ಆ ಕ್ಷೇತ್ರ ಸೃಷ್ಟಿ ಮಾಡಿದ ಉದ್ಯೋಗಗಳ ಸಂಖ್ಯೆ ಕಡಿಮೆ. ಐಟಿ ಉದ್ದಿಮೆಗಳಲ್ಲಿ ಕೆಲಸ ಪಡೆದವರ ಸಂಖ್ಯೆ ಸುಮಾರು ಎರಡೂವರೆ ಲಕ್ಷ. ಈ ಪೈಕಿ ಶೇಕಡಾ ೭೦ರಷ್ಟು ಜನ ಹೊರ ರಾಜ್ಯದವರು.

ಈ ಮಂದಿ ಪಡೆಯುವ ವೇತನ ನಗರ ಪ್ರದೇಶದಲ್ಲೇ ದೊಡ್ಡ ಮಟ್ಟದ ಆರ್ಥಿಕ ಅಂತರಕ್ಕೆ ಕಾರಣವಾಗಿದೆ. ರಾಜ್ಯ-ಕೇಂದ್ರ ಸರಕಾರದ ನೌಕರರಿಗೆ ಈ ಅಂತರದಿಂದಾಗುತ್ತಿರುವ ಹೊಡೆತ ಸಹಿಸಲು ಸಾಧ್ಯವಾಗುತ್ತಿಲ್ಲ. ವೇತನವನ್ನಷ್ಟೇ ನೆಚ್ಚಿಕೊಂಡಿರುವ ಸರಕಾರಿ ನೌಕರರೇ ಇವತ್ತು ಬಾಡಿಗೆ ಮನೆ ಹಿಡಿಯುವುದು ಕಷ್ಟ, ಕಾರಣ ದೊಡ್ಡ ಮೊತ್ತದ ಬಾಡಿಗೆ ನೀಡಲು ಐಟಿ ಉದ್ಯೋಗಿಗಳು ಸಿದ್ಧರಿರುತ್ತಾರಲ್ಲ?

ಹೀಗೆ ರಾಜಧಾನಿಯಲ್ಲಿ ಸರ್ಕಾರಿ ನೌಕರರಿಗೇ ಇಷ್ಟೊಂದು ಸಂಕಟದ ಪರಿಸ್ಥಿತಿ ಇದೆಯೆಂದರೆ, ಗ್ರಾಮೀಣ ಪ್ರದೇಶಗಳ ಜನರ ಸ್ಥಿತಿ ಏನು? ಆ ಜನ ಐಟಿ ಸೃಷ್ಟಿಸಿದ ಆರ್ಥಿಕ ಭೂಕಂಪದ ಮಧ್ಯೆ ಉಳಿಯುವುದು ಹೇಗೆ?

ಇಂದೇನೋ ಐಟಿ ಬೆಂಗಳೂರು, ಮೈಸೂರು, ಮಂಗಳೂರಿನಂಥ ನಗರ ಪ್ರದೇಶದಲ್ಲಿ ಕೇಂದ್ರೀಕೃತವಾಗಿರಬಹುದು. ನಾಳೆ ಅವುಗಳಿಗೆ ಗ್ರಾಮೀಣ ಪ್ರದೇಶದ ಭೂಮಿಯನ್ನು ಒದಗಿಸುವ ಅನಿವಾರ್ಯತೆ ಎದುರಾಗುತ್ತದೆ. ಸರಕಾರದ ಕೈಗಾರಿಕಾ ನೀತಿ ಹೇಗಿದೆ ಎಂದರೆ ಅಭಿವೃದ್ಧಿಯ ಹೆಸರಿನಲ್ಲಿ ಅದು ರೈತರ ಭೂಮಿಯನ್ನು ವಶಪಡಿಸಿಕೊಳ್ಳಲು ಹಿಂಜರಿಯುವುದಿಲ್ಲ. ಆಗ ಗ್ರಾಮೀಣ ಪ್ರದೇಶದ

ಜನರ ಬದುಕು ಏನಾಗಬೇಕು?

ಇವತ್ತು ಐಟಿ ವಿರುದ್ಧ ಧ್ವನಿ ಎತ್ತಿರುವ ಇಂಥ ಎಲ್ಲ ಅನುಮಾನಗಳು ಬಡ-ಮಧ್ಯಮ ವರ್ಗದ ಜನರಲ್ಲಿ, ಗ್ರಾಮೀಣ ಪ್ರದೇಶದ ಜನರಲ್ಲಿ ಮೂಡುವಂತೆ ಆಗಿದೆ.

ಐಟಿ ಉದ್ಯಮಿಗಳು ಕರ್ನಾಟಕದ ಬಹುಸಂಖ್ಯಾತ ಜನರ ಬದುಕನ್ನು ಕುಗ್ಗಿಸುವುದಿಲ್ಲ ಎಂದು ಕೆಲವು ನಾಯಕರು, ಐಟಿ ಉದ್ದಿಮೆಗಳು ತೋರಿಸಿಕೊಡಬೇಕಿದೆ.

ಐಟಿ ಕಾಲಿಟ್ಟ ನಂತರದ ವರ್ಷಗಳಲ್ಲಿ ಬೆಂಗಳೂರು ಕ್ರಮೇಣ ಭಾರತದ ಬ್ಯಾಂಕಾಕ್ ಆಗಿ ಪರಿವರ್ತಿತವಾಗತೊಡಗಿದೆ. ಥಾಯ್ಲೆಂಡಿನ ಕುಖ್ಯಾತ ರಾಜಧಾನಿ ಬ್ಯಾಂಕಾಕ್ ರೀತಿಯಲ್ಲೇ ಈಗ ಬೆಂಗಳೂರಿನ ಹೆಸರು ಅಂತರರಾಷ್ಟ್ರೀಯ ಮಟ್ಟದಲ್ಲಿ ಉನ್ನತ್ತರು, ಲೋಲುಪರ ಬಾಯಲ್ಲಿ ನಲಿದಾಡತೊಡಗಿದೆ. ಇದಕ್ಕೆ ಬೆಂಗಳೂರಿನ ಸಮ್ಮಿಶ್ರ ಸಂಸ್ಕೃತಿ, ಇಂಟರ್‌ನೆಟ್ ಪ್ರಚಾರ, ಕಾನೂನು ವೈಫಲ್ಯ ಮೂರು ಕಾರಣ.

ನಂ. ೧೧೩, ೨ನೇ ತಿರುವು,
ಶನಿಮಹಾತ್ಮ ದೇವಸ್ಥಾನದ ಹಿಂಭಾಗದ ರಸ್ತೆ,
ಜಕ್ಕೂರು ಬಡಾವಣೆ, ಬೆಂಗಳೂರು - ೫೬೦ ೦೬೪



# ಪ್ರಾಥಮಿಕ ಇಂಗ್ಲಿಷ್ ಶಿಕ್ಷಣ ಮತ್ತು ಉದ್ಯೋಗಾವಕಾಶ

◆ ಕೆ. ಲಕ್ಷ್ಮಣರಾವ್

ಸರ್ಕಾರಿ ಶಾಲೆಗಳಲ್ಲಿ ಒಂದನೆಯ ತರಗತಿಯಿಂದ ಇಂಗ್ಲಿಷ್ ಭಾಷೆಯನ್ನು ಕಲಿಸುವ ಇಂಗಿತವನ್ನು ಸರ್ಕಾರ ವ್ಯಕ್ತಪಡಿಸಿದೆ. ಕೆಲವರು ಸರ್ಕಾರದ ಈ ಧೋರಣೆಯನ್ನು ಶ್ಲಾಘಿಸಿದರೆ ಮತ್ತೆ ಕೆಲವರು ವಿರೋಧಿಸುತ್ತಿದ್ದಾರೆ.

ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯಲ್ಲದ ಯಾವುದೇ ಭಾಷೆ ಅಥವಾ ಇಂಗ್ಲಿಷ್ ಭಾಷೆಯನ್ನು ಕಲಿಸಬೇಕೆಂಬ ಪ್ರಯತ್ನಗಳಿಗೆ, ಒತ್ತಡಗಳಿಗೆ 'ಹೌದು–ಇಲ್ಲ'ಗಳ ಉತ್ತರ ನೀಡಲು ಸಾಧ್ಯವಿಲ್ಲ. ಯಾವುದೇ ಅನ್ಯ ಭಾಷೆಯೊಂದನ್ನು ಕಲಿಸುವಾಗ ಕಲಿಸುವುದರ ಹಿಂದಿರುವ ಪೂರ್ವಾಪರಗಳನ್ನು ಆಲೋಚಿಸದೆ ಉತ್ತರಿಸಲೂಬಾರದು. ಇಂಗ್ಲಿಷ್ ಭಾಷೆಯನ್ನು ಒಂದನೇ ತರಗತಿಯಿಂದ ಕಲಿಸಬೇಕು – ಕಲಿಸಬಾರದು ಎಂಬ ವಾದಗಳ ಹಿಂದಿರುವ ತರ್ಕಗಳನ್ನು ಸಾಧಕ-ಬಾಧಕಗಳನ್ನು ತೌಲನಿಕವಾಗಿ ವಿಶ್ಲೇಷಿಸಬೇಕು. ಮೊಂಡುವಾದಗಳಿಗೆ ಬಿದ್ದರೆ ವಾಸ್ತವ ಮತ್ತು ಭವಿಷ್ಯಗಳನ್ನು ಕತ್ತಲಲ್ಲಿಟ್ಟು ಕೈಕಟ್ಟಕೂರಬೇಕಾಗುತ್ತದೆ.

ಸರ್ಕಾರ ಒಂದನೇ ತರಗತಿಯಿಂದ ಇಂಗ್ಲಿಷ್ ಭಾಷೆಯನ್ನು ಗಮನಿಸಬೇಕಿದೆ. 'ನಗರ ಮತ್ತು ಹಳ್ಳಿಗಳ ಸರ್ಕಾರಿ ಮತ್ತು ಖಾಸಗೀ ಶಾಲೆಗಳ ಹಾಗೂ ಕನ್ನಡ ಮಾಧ್ಯಮ ಹಾಗೂ ಇಂಗ್ಲಿಷ್ ಮಾಧ್ಯಮ ಶಾಲೆಗಳ ನಡುವಿನ ಅಂತರ ಕಡಿಮೆ ಮಾಡಲು ಒಂದನೆಯ

ತರಗತಿಯಿಂದ ಸರ್ಕಾರಿ ಶಾಲೆಗಳಲ್ಲಿ ಇಂಗ್ಲಿಷ್ ಕಲಿಸಲು ಉದ್ದೇಶಿಸಲಾಗಿದೆ' ಎಂದು ಸರ್ಕಾರ ಘೋಷಿಸಿದೆ. ಆದರೆ ಜನ ಯಾವತ್ತೂ ಇಂಗ್ಲಿಷ್ ಭಾಷೆಯನ್ನು ಒಂದನೆಯ ತರಗತಿಯಿಂದ ಕಲಿಸಿ ಎಂದು ಚಳುವಳಿ ನಡೆಸಿರಲಿಲ್ಲ. ಇದನ್ನು ನೆನಪಿನಲ್ಲಿಡಬೇಕು. ಹೊರನೋಟಕ್ಕೆ ಸರ್ಕಾರ ಇಂಗ್ಲಿಷ್ ಕಲಿಕೆಯ ಒಲವುಳ್ಳವರ ಪರವಾದ ಸತ್ಯವೆಂದು ಕಾಣುತ್ತದೆ. ಮೊದಲನೆಯದಾಗಿ ಕನ್ನಡ ಮಾಧ್ಯಮ ಮತ್ತು ಇಂಗ್ಲಿಷ್ ಮಾಧ್ಯಮ ಶಾಲೆಗಳ ಅಂತರ ಯಾಕೆ ಸೃಷ್ಟಿಯಾಗಿದೆ, ನಾಯಿ ಕೊಡೆಗಳಂತೆ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆಯಲು ಅವಕಾಶ ಕೊಟ್ಟದ್ದು ಯಾರು? ಶಿಕ್ಷಣದ ಖಾಸಗೀಕರಣ ಹೆಚ್ಚಾದಂತೆ ಈ ಅಂತರವೂ ಹೆಚ್ಚಾಗುತ್ತದೆ. ಇದು ಒಂದು ರೀತಿಯ ಭಾಷಿಕ ಅಸ್ಪೃಶ್ಯತೆಯನ್ನು ಸೃಷ್ಟಿಸಿದೆ. ಇಂತಹ ಸಂದರ್ಭದಲ್ಲಿ ಸಹಜವಾಗಿಯೇ ಜನರಲ್ಲಿ ಪ್ರಶ್ನೆಗಳು ಹುಟ್ಟಿವೆ. ಈ ಪ್ರಶ್ನೆಗಳಿಗೆ ಉತ್ತರಿಸಲು ಮಾಧ್ಯಮ ಶಾಲೆಗಳಿಗೆ ಕಡಿವಾಣ ಹಾಕಲು ಸರ್ಕಾರಕ್ಕೆ ಶಕ್ತಿಯಿಲ್ಲ. ಹಾಗಾಗಿ ಸರ್ಕಾರಿ ಶಾಲೆಗಳಲ್ಲಿ ಇಂಗ್ಲಿಷನ್ನು ಒಂದನೆಯ ತರಗತಿಯಿಂದ ಕಲಿಸುವ ಮಾತನ್ನು ಸರ್ಕಾರ ಆಡುತ್ತಿದೆ.

ಎರಡನೆಯದಾಗಿ ಇಂದು ಅಕ್ಷರಸ್ಥ ಯುವ ಜನರು ಉದ್ಯೋಗಗಳಿಲ್ಲದೆ ಬೀದಿಪಾಲಾಗುತ್ತಿದ್ದಾರೆ. ಬೆಂಗಳೂರಿನಂತಹ ನಗರಗಳಲ್ಲಿ ಒಂದು ಸಣ್ಣ ಸೆಕ್ಯುರಿಟಿ ಗಾರ್ಡ್, ಹೋಟೆಲ್ ಸಪ್ಲೈಯರ್ ಕೆಲಸಗಳನ್ನು ಪಡೆಯಲೂ ಇಂಗ್ಲಿಷ್, ಹಿಂದಿ ಭಾಷೆಗಳು ಬೇಕಾಗಿವೆ. ಆ ಮಟ್ಟಿಗೆ ಕನ್ನಡ ಪರಿಸರ ನಾಶವಾಗುತ್ತಿದೆ. ಹಾಗಾಗಿ ಉದ್ಯೋಗಾಕಾಂಕ್ಷಿಗಳು ಇಂಗ್ಲಿಷ್, ಹಿಂದಿಗಳ ನಿರೀಕ್ಷೆಯಲ್ಲಿದ್ದಾರೆ. ತನ್ನ ಭಾಷಾ ನೀತಿಯಿಂದ ಕನ್ನಡ ಭಾಷಿಕ ಪರಿಸರವನ್ನು ರಕ್ಷಿಸುವ ಮೂಲಕ ಸರ್ಕಾರ ಕನ್ನಡೇತರ ಭಾಷೆಗಳ ಅವಲಂಬನೆಯನ್ನು ತಪ್ಪಿಸಬೇಕಿತ್ತು. ಕನ್ನಡ ಕಲಿತವರಿಗೆ ಎಲ್ಲ ಕ್ಷೇತ್ರಗಳಲ್ಲಿ ಉದ್ಯೋಗದ ಖಾತ್ರಿಯಿರಬೇಕಿತ್ತು. ಇಂಥದ್ದೇನೂ ಇಲ್ಲದ ಪರಿಸ್ಥಿತಿಯಲ್ಲಿ ಸರ್ಕಾರ ಯಾವ ಪರಿಹಾರ ನೀಡಲು ಸಾಧ್ಯವಿದೆ? ಹಾಗಾಗಿ ಹೊಸ ತಲೆಮಾರು ಇಂಗ್ಲಿಷನ್ನು ಕಲಿಯಲೇಬೇಕಾದ ಸ್ಥಿತಿಯನ್ನು ಸರ್ಕಾರವೇ ನಿರ್ಮಾಣ ಮಾಡುತ್ತಿದೆ. ಯುವಕರಿಗೆ ಉದ್ಯೋಗ ಕೊಡಲಾಗದ ಸರ್ಕಾರ ಇಂಗ್ಲಿಷ್ ಕಲಿಸಿ ಉದ್ಯೋಗದ ಸ್ಪರ್ಧೆಗಳಿಸುವ ಮಾತಾಡುತ್ತಿದೆ. ಇದು ಕಣ್ಣೊರೆಸುವ ಮತ್ತು ತನ್ನ ಜವಾಬ್ದಾರಿಯಿಂದ ನುಣುಚಿಕೊಳ್ಳುವ ತಂತ್ರವಾಗಿದೆ.

ಮೂರನೆಯದಾಗಿ ಸಾಮ್ರಾಜ್ಯಶಾಹಿ ಜಾಗತೀಕರಣ ಬಡ ರಾಷ್ಟ್ರಗಳ ಎಲ್ಲ ಗಡಿಗಳನ್ನೂ ದಾಟಿ ಒಳನುಗ್ಗುತ್ತಿದೆ. ಜಾಗತೀಕರಣದ ಹೆಸರಿನಲ್ಲಿ ಒಳನುಗ್ಗಿಸುವ ಬಹುರಾಷ್ಟ್ರೀಯ ಕಂಪನಿಗಳಿಗೆ, ಕೈಗಾರಿಕೆಗಳಿಗೆ ಹೇರಳ ಕಾರ್ಮಿಕರು ಬೇಕಾಗಿದ್ದಾರೆ. ಈ ಕಾರ್ಮಿಕರ ಸೃಷ್ಟಿಗೆ ಅಗತ್ಯವಿರುವ ಶಿಕ್ಷಣ ಪದ್ಧತಿಯನ್ನ ರೂಪಿಸುವ ಪ್ರಯತ್ನವೊಂದು ಚಾಲನೆಯಲ್ಲಿದೆ. ಬಹುರಾಷ್ಟ್ರೀಯ ಕಂಪನಿಗಳ ಉತ್ಪಾದನೆಯನ್ನು ಸುಗಮಗೊಳಿಸಿಕೊಳ್ಳುವ ಉದ್ದೇಶದಿಂದ ಇಂಗ್ಲಿಷ್ ಭಾಷೆಯನ್ನು ಶಿಕ್ಷಣ ಕ್ರಮದಲ್ಲಿ ಇನ್ನಷ್ಟು ಅನಿವಾರ್ಯಗೊಳಿಸಬೇಕಿದೆ. ಅಂತಹ ಯೋಜನೆಗಳು ಜಾಗತೀಕರಣ ನೀತಿಗಳಲ್ಲಿಯೇ ಇವೆ. ಅವುಗಳ ಭಾಗವಾಗಿಯೂ ಇಂಗ್ಲಿಷನ್ನು ಕಲಿಸಬೇಕಿದೆ. ಖಾಸಗಿ ವಿದೇಶಿ ವಿಶ್ವವಿದ್ಯಾಲಯಗಳು ಭಾರತ ಪ್ರವೇಶಿಸಲಿವೆ. ಇವುಗಳ ಕನ್ನಡ ಭಾಷೆಯಲ್ಲಿ ಬೋಧಿಸಲಾರವು. ತನ್ನ ಇಂಗ್ಲಿಷ್ ಶಿಕ್ಷಣ ಸಂಸ್ಥೆಗಳಿಗೆ ಹೇರಳವಾಗಿ ಇಂಗ್ಲಿಷ್ ಮಾಧ್ಯಮ ಅಧ್ಯಯನಾಕಾಂಕ್ಷಿಗಳು ಅಂದರೆ ಶಿಕ್ಷಣ ಗ್ರಾಹಕರು ದೊರೆಯಬೇಕಿದೆ. ಏಕೆಂದರೆ ಇಂದು ಶಿಕ್ಷಣ ಕ್ಷೇತ್ರ ಕೂಡ ಲಾಭದಾಯಕ ಉದ್ಯಮ ಹಾಗೂ ಇಂಗ್ಲಿಷ್ ಶಿಕ್ಷಣವೆಂಬ ಸರಕಿನ ಖರೀದಿದಾರರ ಸಂಖ್ಯೆ ಹೆಚ್ಚಾದಂತೆ ಅವರ ಲಾಭಕ್ಕೂ ಹೆಚ್ಚಳ ಇದೆ. ಹೀಗೆಯೇ ವಿದೇಶಿ ಸಿನಿಮಾ, ವಿದೇಶಿ ಇಂಗ್ಲಿಷ್ ಪತ್ರಿಕೆಗಳು ಮುಂತಾದವುಗಳು ಅಧಿಕ ಗ್ರಾಹಕರು ಬೇಕಿದೆ. ಹಾಗಾಗಿ ಪ್ರಾಥಮಿಕ ಹಂತದಿಂದಲೇ ಇಂಗ್ಲಿಷ್ ಅಚ್ಚಿನಲ್ಲಿ ಕನ್ನಡ ಮನಸ್ಸುಗಳನ್ನು ಎರಕ ಹೊಯ್ದರೆ ಈ ಹಾದಿ

ಸುಲಭವಾಗುತ್ತದೆ. ಜಾಗತೀಕರಣದ ಅಂತಿಮ ಹಂತದ ನೀತಿಗಳು ಕೂಡ ಇದೇ ಸಂದರ್ಭದಲ್ಲಿ ಜಾರಿಗೊಳ್ಳುತ್ತಿರುವುದನ್ನು ಗಮನಿಸಬೇಕು.

ನಾಲ್ಕನೆಯದಾಗಿ ಉನ್ನತ ಅಧಿಕಾರ ಹೊಂದಿರುವ ಆಡಳಿತ ವರ್ಗದವರಿಗೆ ಮತ್ತು ಜನಪ್ರತಿನಿಧಿಗಳಿಗೆ ಇಂಗ್ಲಿಷ್ ವ್ಯಾಮೋಹವಿದೆ. ಈ ವರ್ಗವೂ ತನ್ನ ಲಾಭಕ್ಕಾಗಿ ಇಂಗ್ಲಿಷನ್ನು ಶಿಕ್ಷಣ ಕ್ರಮದಲ್ಲಿ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಎಲ್ಲಕ್ಕಿಂತ ಹೆಚ್ಚಾಗಿ ಜಾಗತೀಕರಣದ ಹೆಚ್ಚು ಲಾಭದ ನಿರೀಕ್ಷೆಯಲ್ಲಿ ಈ ವರ್ಗವಿದೆ. ಇಂದಿನ ಪ್ರಧಾನ ಮಂತ್ರಿ ಮನಮೋಹನಸಿಂಗ್ ಮತ್ತು ಇನ್ಫೋಸಿಸ್‌ನ ನಾರಾಯಣಮೂರ್ತಿಯವರು ಎರಡು ವರ್ಷಗಳ ಹಿಂದೆ ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ನಡೆದ ಜಾಗತಿಕ ಹೂಡಿಕೆದಾರರ ಸಮಾವೇಶದಲ್ಲಿ ಘೋಷಿಸಿದ್ದನ್ನು ನೆನಪಿಸಿಕೊಳ್ಳಬಹುದು.

ಹೀಗೆ ಹತ್ತು ಹಲವು ಒತ್ತಡಗಳು ಸರ್ಕಾರಕ್ಕಿವೆ. ಹಾಗಾಗಿ ಇಂಗ್ಲಿಷನ್ನು ಒಂದನೇ ತರಗತಿಯಿಂದ ಕಲಿಸುವ ಇಂಗಿತವನ್ನು ವ್ಯಕ್ತಪಡಿಸುತ್ತಿದೆ. ಇನ್ನು ಇಂಗ್ಲಿಷ್ ಪರವಾದ ನಿಲುವು ವ್ಯಕ್ತಗೊಳಿಸುತ್ತಿರುವ ಜನರಿಗೆ ಬದುಕಿನ ಪ್ರಶ್ನೆ ಮುಖ್ಯವಾಗಿದೆ. ಸೆಕ್ಯೂರಿಟಿ ಗಾರ್ಡ್ ಕೆಲಸ ಪಡೆಯಲೂ ಇಂಗ್ಲಿಷ್ ಅಗತ್ಯವಿರುವಾಗ ಇನ್ನು ಖಾಸಗಿ ಮತ್ತು ಸರ್ಕಾರಿ ವಲಯಗಳ ಉನ್ನತ ಉದ್ಯೋಗಗಳ ಅವಕಾಶ ಪಡೆಯುವ ಇಂಗ್ಲಿಷ್ ಅನಿವಾರ್ಯವಾಗಿರುವುದು ಸಹಜ. ಹಾಗಾಗಿ ಜನರು ಇಂಗ್ಲಿಷ್ ಕಲಿಯಬೇಕಾಗಿದೆ. ಇದನ್ನು ಅರ್ಥಮಾಡಿಕೊಳ್ಳದೆ ಇಂಗ್ಲಿಷ್ ಕಲಿಕೆಯ ಒಲವುಳ್ಳ ಜನರನ್ನು ದೂಷಿಸುವುದು ಸರಿಯಲ್ಲ. ಇಂಗ್ಲಿಷ್ ಕಲಿಕೆಯ ಅನಿವಾರ್ಯತೆ ಸೃಷ್ಟಿಸಿದ ರಾಜಕೀಯ ನೀತಿಗಳನ್ನು ನಾವು ವಿಮರ್ಶೆಗೊಡ್ಡಬೇಕಿದೆ.

ವಸಾಹತುಶಾಹಿ ಆಡಳಿತ ಕಾಲದಿಂದಲೂ ಭಾರತದ ಎಲ್ಲ ಭಾಷಿಕರ ಮೇಲೂ ಭಾಷಾ ನೀತಿಗಳನ್ನು ಹೇರಲಾಗಿದೆ. ಈ ನೀತಿಗಳು ಜನರು ಅನಿವಾರ್ಯವಾಗಿ ಇಂಗ್ಲಿಷ್ ಭಾಷೆಯನ್ನು ಅಪ್ಪಿಕೊಳ್ಳುವಂತೆ ಮಾಡಿದೆ. ಅದೇ ಸ್ಥಿತಿ ಈಗಲೂ ಮುಂದುವರಿದಿದೆ. ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಇಂಗ್ಲಿಷ್ ಭಾಷೆಯ ಅನಿವಾರ್ಯತೆ ಹೆಚ್ಚುತ್ತಿರುವುದನ್ನು ಸಾಮ್ರಾಜ್ಯಶಾಹಿ ರಾಷ್ಟ್ರಗಳ ಹಿಡಿತ ಹೆಚ್ಚಾಗುತ್ತಿರುವುದೆಂದೇ ಅರ್ಥಮಾಡಿಕೊಳ್ಳಬೇಕು.

ಇಂಗ್ಲಿಷ್ ಭಾಷೆಯನ್ನು ಕಲಿಸಲೇಬಾರದು ಎಂದು ನಿರ್ಧಾರಕ್ಕೆ ಬಂದರೆ ಅದೂ ಜನ ವಿರೋಧಿ ಇಮೇಜ್‌ಗೆ ಕಾರಣವಾಗುತ್ತದೆ. ಇಂಗ್ಲಿಷನ್ನು ಒಂದನೆಯ ತರಗತಿಯಿಂದ ಕಲಿಸಬಾರದು ಎನ್ನುವಾಗ ನಮಗೆ ಖಚಿತವಾದ ಪರ್ಯಾಯ ಮಾದರಿಗಳ ತಿಳುವಳಿಕೆಗಳು ಅಗತ್ಯ. ಪ್ರಸ್ತುತ ಪರಿಸ್ಥಿತಿಯ ಸ್ಪಷ್ಟ ಅರಿವಿನೊಂದಿಗೆ ವಾಸ್ತವ ಮತ್ತು ಭವಿಷ್ಯಗಳ ದೃಷ್ಟಿಯಿಂದ ಸೂಕ್ತ ಪರ್ಯಾಯ ಕ್ರಮಗಳನ್ನು ಅನ್ವೇಷಿಸಬೇಕು.

ನಿಜವಾಗಿಯೂ ಸರ್ಕಾರಿ ಶಾಲೆಗಳು ಮತ್ತು ಖಾಸಗಿ ಶಾಲೆಗಳ ಮತ್ತು ಕಲಿತವರ ಕಲಿಯುವವರ ನಡುವಿನ ಅಂತರವನ್ನು ಕುಗ್ಗಿಸುವ ಆಶಯ ಸರ್ಕಾರಕ್ಕಿದ್ದರೆ ಏಕರೂಪದ ಶಿಕ್ಷಣ ಪದ್ಧತಿಯನ್ನು ಜಾರಿಗೆ ತರಬೇಕು. ಅಂದರೆ, ಅಸಮಾನತೆಯನ್ನು ಸೃಷ್ಟಿಸುತ್ತಿರುವ ಇಂಗ್ಲಿಷ್ ಶಿಕ್ಷಣ ಮಾಧ್ಯಮದ ಸ್ವರೂಪವನ್ನು ಬದಲಾಯಿಸಬೇಕು. ಸೃಜನಶೀಲ ವೈಜ್ಞಾನಿಕ ಶಿಕ್ಷಣ ಕ್ರಮ ನಾಡಿನ ಸಾಂಸ್ಕೃತಿಕ ಸ್ವಾವಲಂಬಿ ಸಾರ್ವಭೌಮ ಹಕ್ಕುಗಳನ್ನು ಎತ್ತಿ ಹಿಡಿಯುವುದಾದರೆ, ಪ್ರಾಥಮಿಕ-ಮಾಧ್ಯಮಿಕ ಹಂತಗಳಲ್ಲಿ ಮಾತೃಭಾಷಾ ಶಿಕ್ಷಣವನ್ನು ಜಾರಿಗೊಳಿಸಿ ಇಂಗ್ಲಿಷನ್ನು ಅಥವಾ ಯಾವುದೇ ಭಾಷೆಗಳನ್ನು ಐಚ್ಛಿಕವಾಗಿ ಕಲಿಸಬೇಕು. ರಾಜಕೀಯ ಇಚ್ಛಾಶಕ್ತಿ ಇನ್ನೂ ಹೆಚ್ಚಾಗಿದ್ದರೆ ಉನ್ನತ ಶಿಕ್ಷಣಕ್ಕೂ ಅದನ್ನು ವಿಸ್ತರಿಸಬೇಕು. ಈಗಿನ ಗಿಳಿಪಾಠವಾಗಿರುವ ಶಿಕ್ಷಣವನ್ನು ಮತ್ತಷ್ಟು ಸೃಜನಶೀಲಗೊಳಿಸಬೇಕು. ಅದನ್ನು ಕಲಿತವನಿಗೆ ನಿಜವಾಗಿಯೂ ಸಂಹವನಕ್ಕೆ, ಅವನ ಬದುಕಿನ ಅಗತ್ಯಗಳಿಗೆ ಉಪಯುಕ್ತವಾಗಬೇಕು. ಅದಕ್ಕೆ ಬೇಕಾದ ಸೌಲಭ್ಯಗಳನ್ನು

ಸರ್ಕಾರ ಕಲಿಸಿಕೊಡಬೇಕು. ಆಡಳಿತ ಕ್ಷೇತ್ರದಲ್ಲಿ ಔದ್ಯೋಗಿಕ ಕ್ಷೇತ್ರಗಳಲ್ಲಿ ಕನ್ನಡ ಪರಿಸರ ನಾಶವಾಗದಂತೆ ಭಾಷಾ ನೀತಿಯನ್ನು ಕಡ್ಡಾಯವಾಗಿ ಜಾರಿಗೊಳಿಸಬೇಕು.

ಇಂದು ಇಂಥ ಇಕ್ಕಟ್ಟಿನ ಪರಿಸ್ಥಿತಿ ಇದೆಯೆಂದರೆ ಕಟ್ಟಾ ಕನ್ನಡಪರವಾದವರು ಕೂಡ ಇಂಗ್ಲಿಷನ್ನು ನಿರಾಕರಿಸಲಾಗದ ಸ್ಥಿತಿಯಲ್ಲಿದ್ದಾರೆ ಅಥವಾ ತಮ್ಮ ಮಕ್ಕಳಿಗೆ ಇಂಗ್ಲಿಷ್ ಮಾಧ್ಯಮದ ಶಿಕ್ಷಣ ಕೊಡಿಸುತ್ತಾ ಟೀಕೆಗೆ ಗುರಿಯಾಗುತ್ತಿದ್ದಾರೆ. ಅಂಥ ಅನಿವಾರ್ಯ ಸ್ಥಿತಿ ಕರ್ನಾಟಕದ ಜನರ ಮುಂದೆ ಇದೆ. ಹಾಗಾಗಿ ಇಂಥ ಸಂದರ್ಭದಲ್ಲಿ ನಾಡಿನ ಜನತೆ, ಬೌದ್ಧಿಕ ವರ್ಗದವರು ಮತ್ತು ಚಳುವಳಿಕಾರರ ಹೆಗಲ ಮೇಲೆ ದೊಡ್ಡ ಜವಾಬ್ದಾರಿಯಿದೆ. ಹಲವು ಬಾರಿ ನಾವು ಯುವಜನರಿಗೆ ನಮ್ಮ ಸಂಸ್ಕೃತಿ, ಪರಂಪರೆ ಬಗೆಗೆ ಕಾಳಜಿಯಿಲ್ಲ ಎನ್ನುತ್ತೇವೆ. ಆದರೆ ಇಂತಹ ಅವೈಜ್ಞಾನಿಕ ಭಾಷಾ ಶಿಕ್ಷಣ ಪದ್ಧತಿ ಜಾರಿಗೊಳಿಸುವ ಮೂಲಕ ಅವರನು ಸಂಸ್ಕೃತಿಯಿಂದ ಸ್ವಾಭಿಮಾನಿ ಬದುಕಿನಿಂದ ವ್ಯವಸ್ಥಿತವಾಗಿ ಬೇರ್ಪಡಿಸಲಾಗುತ್ತಿದೆ. ಆದ್ದರಿಂದ ಇಂದು ನಾಡಿನ ಜನತೆ ಮತ್ತು ಪ್ರಜಾತಂತ್ರವಾದಿಗಳ ಮುಂದೆ ಚಾರಿತ್ರಿಕ ಮತ್ತು ನಿರ್ಣಾಯಕ ಜವಾಬ್ದಾರಿ ನಿರ್ವಹಿಸಬೇಕಾದ ಹೊಣೆ ಇದೆ. ಇಲ್ಲವಾದರೆ ಜನವಿರೋಧಿ ಆಟಗಳಿಗೆ ನಾಡಿನ ಜನತೆ ದಾಳಗಳಾಗಬೇಕಾಗುತ್ತದೆ.

ಅಸಮಾನತೆಯಿಂದ ಕೂಡಿರುವ ನಮ್ಮ ಶಿಕ್ಷಣ ಪದ್ಧತಿಯ ಬಗ್ಗೆ ನಾವು ಏನೇ ಹೇಳಿದರೂ ಹಳ್ಳಿಗಾಡಿನಲ್ಲಿ ಓದಿದ/ಓದುತ್ತಿರುವ ನಮ್ಮ ಮಕ್ಕಳು ಸಿಟಿಯಲ್ಲಿ ಕಾನ್ವೆಂಟ್‌ಗಳಲ್ಲಿ ಓದಿದ ಮಕ್ಕಳ ಜೊತೆಗೆ ಸ್ಪರ್ಧಿಸುವುದರಲ್ಲಿ ಹೀನಾಯವಾಗಿ ಸೋಲುತ್ತಿದ್ದಾರೆ. 'ಸ್ಪರ್ಧೆ' ಎಂದರೆ ಅವರುಗಳ ನಡುವಿನ ಜ್ಞಾನ ಅಥವಾ ತಿಳುವಳಿಕೆಯ ಸ್ಪರ್ಧೆಯಲ್ಲ; ಉದ್ಯೋಗಾವಕಾಶದಲ್ಲಿನ ಸ್ಪರ್ಧೆ. ಇಂದು ಉದ್ಯೋಗಗಳು ಸೃಷ್ಟಿಯಾಗುತ್ತಿರುವುದು ಬೃಹತ್ ನಗರಗಳಲ್ಲಿ ಮಾತ್ರ. ಬರೀ ಸಾಫ್ಟ್‌ವೇರ್‌ನಲ್ಲಷ್ಟೇ ಅಲ್ಲ, ಇತರ ವಲಯಗಳಲ್ಲೂ ಇಂಗ್ಲಿಷ್ ಎಷ್ಟು ಪ್ರಾಮುಖ್ಯತೆಯನ್ನು ಪಡೆದುಕೊಳ್ಳತೊಡಗಿದೆಯೆಂದರೆ, ನಮ್ಮ ಹಳ್ಳಿಗಾಡಿನ ಮಕ್ಕಳು ಎಲ್ಲೆಡೆ ಸೋಲುತ್ತಿದ್ದಾರೆ.

ನಿದರ್ಶನಕ್ಕೆ ಇಂದು ಬೆಂಗಳೂರಿನ ಎಲ್ಲೆಡೆ 'ಬಜೆಟ್' ಹೋಟೆಲುಗಳು ತಲೆಯೆತ್ತುತ್ತಿವೆ. ಸಾಮಾನ್ಯ ಹೋಟೆಲುಗಳಿಗಿಂತ ಮೇಲ್ಮಟ್ಟದಲ್ಲಿರುವ, ಸ್ಟಾರ್‌ಹೋಟೆಲುಗಳಿಗಿಂತ ಕೆಳಮಟ್ಟದಲ್ಲಿರುವ ಹೋಟೆಲುಗಳು. ಅಲ್ಲಿನ ಕೆಲಸ ಮಾಡುವವರಿಗೆ ಕನಿಷ್ಠ ಮಟ್ಟದ ಇಂಗ್ಲಿಷ್ ಪರಿಜ್ಞಾನ ಇರಲೇಬೇಕು!

ಇನ್ನು 'ಕಾಲ್‌ಸೆಂಟರ್'ಗಳ ಬಗ್ಗೆ ಹೇಳುವುದೇ ಬೇಡ. ಡಬ್ಬಲ್‌ಗ್ರಾಜುಯೇಟ್‌ಗಳಾಗಿರುವ ನಮ್ಮ ಗ್ರಾಮೀಣ ಹುಡುಗರಿಗೆ ಅಲ್ಲಿ ಕೆಲಸ ಸಿಗುತ್ತಿಲ್ಲ. ಇಂಗ್ಲಿಷ್ ಭಾಷೆಯನ್ನು ವ್ಯಾವಹಾರಿಕವಾಗಿ ಬಳಸುವುದನ್ನು ರೂಢಿಸಿಕೊಂಡಿರುವ ಕೇವಲ ಹತ್ತನೇ ತರಗತಿ ಪಾಸಾದ ಲಕ್ಷಾಂತರ ಯುವಜನ ಅಲ್ಲಿ ಕೆಲಸ ಮಾಡುತ್ತಿದ್ದಾರೆ!

ಎಲ್ಲ ಸವಲತ್ತುಗಳನ್ನು ಸಿಟಿಗಳಲ್ಲಿ ಬೆಳೆಯುತ್ತಿರುವ ಮಧ್ಯಮವರ್ಗ ಮತ್ತು ಅದರ ಮೇಲ್ಪಟ್ಟ ವರ್ಗಗಳು ಕಸಿದುಕೊಳ್ಳುತ್ತಿವೆ. ಒಟ್ಟು ಜನತೆಯಲ್ಲಿ ಶೇಕಡ ಹದಿನೈದರಷ್ಟು ಮಾತ್ರ ಇರುವವರು ಎಲ್ಲ ಬಗೆಯ ಅಗತ್ಯಗಳನ್ನು ಪೂರೈಸಿಕೊಳ್ಳುತ್ತಾ ತಾರತಮ್ಯವನ್ನು ನಿವಾರಿಸುವುದು ಹೇಗೆ?

ನಮ್ಮ ದೇಶದ ದೊಡ್ಡ ದುರಂತವೆಂದರೆ, ಸ್ವಾತಂತ್ರ್ಯ ಬಂದ ದಿನದಿಂದಲೂ ಸಮಾನ ಶಿಕ್ಷಣ ನೀತಿ ಇಲ್ಲದಿರುವುದು. ನಮ್ಮ ಸಂವಿಧಾನದಲ್ಲಿ ಎಲ್ಲರಿಗೂ ಸಮಾನ ಅವಕಾಶ ಮತ್ತು ಹಕ್ಕುಗಳನ್ನು ಘೋಷಿಸಿದರೂ ಅನುಷ್ಠಾನದಲ್ಲಿ ಅದನ್ನು ತರಲು ಯಾರೂ ಗಂಭೀರವಾಗಿ ಪ್ರಯತ್ನಿಸಲಿಲ್ಲ.

ಇಂದು ಖಾಸಗಿ ಶಿಕ್ಷಣ ಸಂಸ್ಥೆಗಳು ಎಲ್ಲೆಡೆ ರಾರಾಜಿಸುತ್ತಿವೆ. ಆ ಸಂಸ್ಥೆಗಳಲ್ಲಿ ಇರುವ ಪಠ್ಯಕ್ರಮಕ್ಕೂ, ಸರ್ಕಾರಿ ಶಾಲೆಗಳಲ್ಲಿರುವ ಪಠ್ಯಕ್ರಮಕ್ಕೂ ಜಗತ್ತಿನ ಅತ್ಯಂತ ಶ್ರೀಮಂತ ಪ್ರದೇಶ್ಎನಿಸಿದ

ಲಾಸ್ ಏಂಜಲೀಸ್‌ಗೂ ನಮ್ಮ ಬೀದರ್‌ನ ಕೊಳಾಲಹಳ್ಳಿಗೂ ಇರುವಷ್ಟು ವ್ಯತ್ಯಾಸವಿದೆ! ಸರ್ಕಾರವೆ 'ಸೆಂಟ್ರಲ್ ಸಿಲಬಸ್' ಶಾಲೆಗಳಿಗೆ ಅನುಮತಿ ನೀಡುತ್ತಿದೆ!

ಇದರ ಬಗ್ಗೆ ತಕರಾರು ಎತ್ತಿದರೆ ಆ ಸಂಸ್ಥೆಗಳ ಮಾಲೀಕರು ನ್ಯಾಯಾಲಯಗಳ ಮೊರೆಹೊಕ್ಕು 'ತಡೆಯಾಜ್ಞೆ' ತರುತ್ತಾರೆ. ಒಂದು ದೇಶದ ಜನತೆಗೆ ಭದ್ರ ಬುನಾದಿಯನ್ನು ಒದಗಿಸುವುದು ಶಿಕ್ಷಣ ಮಾತ್ರ. ಅದರಲ್ಲೂ ಪ್ರಾಥಮಿಕ ಶಿಕ್ಷಣ ಅತೀ ಮುಖ್ಯವಾದದ್ದು.

ಈ ಕ್ಷಣದಲ್ಲಿ ಇಂಗ್ಲಿಷ್ ಅನ್ನು ಯಾವ ತರಗತಿಯಿಂದ ಪ್ರಾರಂಭಿಸಬೇಕೆನ್ನುವುದಕ್ಕಿಂತಲೂ ಎಲ್ಲ ಮಕ್ಕಳಿಗೂ ಸಮಾನ ಶಿಕ್ಷಣ ವ್ಯವಸ್ಥೆ ಸಾಧ್ಯವಾಗಬೇಕೆನ್ನುವುದು ನನ್ನ ಅಭಿಮತ.

ಆದರೆ ಅದನ್ನು ಅನುಷ್ಠಾನಗೊಳಿಸುವುದು ಅಷ್ಟು ಸುಲಭವಲ್ಲ. ಅದಕ್ಕೆ ಬೇಕಾದ ದೈತ್ಯಶಕ್ತಿ ನಮ್ಮ ಸರ್ಕಾರಕ್ಕಿಲ್ಲ. ಅಲ್ಲಿಯವರೆಗೂ ಇಂಗ್ಲಿಷನ್ನು ಒಂದನೇ ತರಗತಿಯಿಂದಲೇ ರಾಜ್ಯದ ಎಲ್ಲ ಶಾಲೆಗಳಲ್ಲಿಯೂ ಬೋಧಿಸಬೇಕೆಂದು ಆಗ್ರಹಪಡಿಸುವುದರಲ್ಲಿ ಯಾವ ತಪ್ಪೂ ಕಾಣುತ್ತಿಲ್ಲ. ಆದರೆ ಅದು ಜಾರಿಯಾಗಿಬಿಟ್ಟರೆ ಸಮಾನ ಶಿಕ್ಷಣ ನೀತಿಯ ಪರವಾಗಿ ಹೋರಾಟ ನಡೆಯುವುದಿಲ್ಲವೇನೋ ಎನ್ನುವ ಆತಂಕ ನನಗಿದೆ.

ನಾವು ಸದಾ ಪ್ರಜಾಪ್ರಭುತ್ವದ ಬಗ್ಗೆ ಬೊಗಳೆ ಹೊಡೆಯುತ್ತಿರುತ್ತೇವೆ. ಆದರೆ ನಮ್ಮಲ್ಲಿ ನಿಜಕ್ಕೂ ಪ್ರಜಾಪ್ರಭುತ್ವ ಸ್ಥಾಪಿತವಾಗಿಲ್ಲವೆನ್ನುವ ಅರಿವೆ ನಮಗಿಲ್ಲ. ಇಲ್ಲಿ ಯಾರಿಗೆ ಯಾರೂ ಸಮಾನರಲ್ಲ. ಇಲ್ಲಿರುವುದು ಕೇವಲ ದೊಡ್ಡ ದೊಡ್ಡಗುಂಪುಗಳು ಮಾತ್ರ. ಇಲ್ಲಿರುವ ಶ್ರೀಮಂತ ಕುಳಗಳದೇ ಒಂದು ಗುಂಪು; ವೈದಿಕರದೆ ಒಂದು ಗುಂಪು; ಮಿಲಿಟರಿ ಅಧಿಕಾರಿಗಳದೆ ಒಂದು ಗುಂಪು; ರಾಜಕಾರಣಿಗಳದೇ ಒಂದು ಗುಂಪು.

ಪ್ರತಿಯೊಂದು ಗುಂಪೂ ಸಹ ತನ್ನ ಅಸ್ತಿತ್ವಕ್ಕಾಗಿ, ಏಳಿಗೆಗಾಗಿ ಶ್ರಮಿಸುತ್ತಿದೆ. ಬಂಡವಾಳಶಾಹಿ ವ್ಯವಸ್ಥೆ ಅದಕ್ಕೆ ಇಂಬನ್ನು ಕೊಡುತ್ತದೆ. ಕೇವಲ ಒಂದು ವರ್ಷದ ಹಿಂದೆ ಹಣವಂತನಾದವನೂ ಸಹ ತನ್ನ ಮಕ್ಕಳನ್ನು 'ಬಿಷಪ್ ಕಾಟನ್'ಗೆ ಸೇರಿಸಲು ಕಾತರಿಸುತ್ತಾನೆ; ಬೇರೊಂದು ಗುಂಪಿಗೆ ಸೇರ್ಪಡೆಯಾಗುತ್ತಾನೆ.

ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ನಾವು ಗೆಲ್ಲಬೇಕಾದರೆ ಇಂಗ್ಲಿಷ್ ಜ್ಞಾನ ಅವಶ್ಯಕ. ಗ್ರಾಮೀಣ ವಿದ್ಯಾರ್ಥಿಗಳು, ನಗರ ಪ್ರದೇಶದ ವಿದ್ಯಾರ್ಥಿಗಳೊಡನೆ ಪೈಪೋಟಿಯಲ್ಲಿ ಬಹುತೇಕ ಸೋಲುತ್ತಾರೆ. ಆದ್ದರಿಂದ ಸರಕಾರ ಎಲ್ಲವನ್ನೂ ಕೂಲಂಕಷವಾಗಿ ಪರಿಶೀಲಿಸಿ ನಂತರ ಸರಿಯಾದ ನಿರ್ಧಾರ ತೆಗೆದುಕೊಳ್ಳಬೇಕು. ಗ್ರಾಮೀಣ ಪ್ರದೇಶದವರೂ ಉನ್ನತ ಶಿಕ್ಷಣ ಪಡೆಯಬೇಕಾದರೆ ಒಂದನೇ ತರಗತಿಯಿಂದಲೇ ಇಂಗ್ಲಿಷ್ ಕಲಿಸುವುದು ಸೂಕ್ತ. ಆದ್ದರಿಂದ ಸರಕಾರ ಜನಸಾಮಾನ್ಯರ ಗ್ರಾಮೀಣ ವಿದ್ಯಾರ್ಥಿಗಳನ್ನು ಹಿತದೃಷ್ಟಿಯಲ್ಲಿಟ್ಟುಕೊಂಡು ಸರಿಯಾದ ನಿರ್ಧಾರ ತೆಗೆದುಕೊಳ್ಳಬೇಕು.

ಕಳೆದ ೫೫ ವರ್ಷಗಳಲ್ಲಿ ನಮ್ಮ ವಿದ್ಯಾಭ್ಯಾಸ ವ್ಯವಸ್ಥೆ ಸಾಕಷ್ಟು ಸುಧಾರಿಸಿದೆ ಎಂದರೆ ಉತ್ಪ್ರೇಕ್ಷೆಯಲ್ಲ. ನಮ್ಮ ಒಬ್ಬ ಸಾಧಾರಣ ವಿದ್ಯಾರ್ಥಿಯನ್ನು ಪಶ್ಚಿಮ ರಾಷ್ಟ್ರಗಳ ಸಾಧಾರಣ ವಿದ್ಯಾರ್ಥಿಯ ಜೊತೆ ಹೋಲಿಸಿದರೆ ನಮ್ಮ ವಿದ್ಯಾರ್ಥಿ ಖಂಡಿತ ಯಾವುದರಲ್ಲಿಯೂ ಕಡಿಮೆ ಇರುವುದಿಲ್ಲ. ಆದರೂ ಭಾಷೆಯ ವಿಚಾರದಲ್ಲಿ ನಮ್ಮಲ್ಲಿ ಒಂದು ಕೀಳರಿಮೆ ಭಾವನೆ ಬೆಳೆದುಬಂದಿದೆ. ಇದರಿಂದಾಗಿ ಶಿಕ್ಷಣ ವ್ಯವಸ್ಥೆಯಲ್ಲೇ ಅನವಶ್ಯಕ ಗೊಂದಲ ಏರ್ಪಟ್ಟು ಎಳೆಯ ವಯಸ್ಸಿನ ವಿದ್ಯಾರ್ಥಿಗಳಿಗೆ ಅಪಾಯವಾಗುತ್ತಿದೆ. ಭಾಷೆಯನ್ನು ಕಲಿಯುವ ಕ್ರಮದ ಬಗ್ಗೆ ಪರಿಣಿತರ ಜೊತೆ, ಭಾಷಾ ವಿಜ್ಞಾನಿಗಳ ಜೊತೆ ಚರ್ಚೆ ಮಾಡಿ ವೈಜ್ಞಾನಿಕವಾಗಿ ತೀರ್ಮಾನ ತೆಗೆದುಕೊಳ್ಳಬೇಕು. ಸಾಕಷ್ಟು ಪಾಂಡಿತ್ಯವಿಲ್ಲದ

ಜನ ತೀರ್ಮಾನ ಕೊಡುವ ವಿಷಯ ಇದಲ್ಲ. ತಾತ್ವಿಕವಾಗಿ ನೋಡುವುದಾದರೆ ಇದು ನ್ಯಾಯಾಲಯದಲ್ಲಿಯೂ ತೀರ್ಮಾನವಾಗುವ ವಿಷಯವಲ್ಲ.

ಭಾಷಾ ವಿಜ್ಞಾನ ಮತ್ತು ಇಂಗ್ಲಿಷ್ ಭಾಷೆಯನ್ನು ಕಲಿಸುವುದು ಬೆಳೆದಿರುವ ವಿಷಯಗಳು. ಈ ವಿಷಯಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿರುವ ವಿದ್ವಾಂಸರು ಏನು ಹೇಳುತ್ತಾರೆ ಎನ್ನುವುದನ್ನು ನಾವು ಗಮನಿಸದಿದ್ದಲ್ಲಿ, ಚಾರಿತ್ರಕವಾಗಿ ಮತ್ತು ಸಾಂಸ್ಕೃತಿಕವಾಗಿ ದೊಡ್ಡ ತಪ್ಪನ್ನೇ ಮಾಡಿದಂತಾಗಬಹುದು. ನಾಗರೀಕರು ಈ ವಿಷಯದಲ್ಲಿ ಭಾವುಕರಾಗಿ ಅನುಭವಿಸಿದ ಆತಂಕ ಮತ್ತು ತಲ್ಲಣಗಳು ಸಹಜವೆ.

ಇಂಗ್ಲಿಷಿನ 'ಪರವಾಗಿ' ವಾದಿಸುವ ಬಹಳಷ್ಟು ಜನ ಇಂಗ್ಲಿಷ್ ಭಾಷೆಯನ್ನು ಮಕ್ಕಳಿಗೆ ಕಲಿಸದಿದ್ದರೆ ನಮ್ಮ ಮಕ್ಕಳು ಸರಕು ಮಾರುಕಟ್ಟೆಯ ಸ್ಪರ್ಧೆಯಲ್ಲಿ ಹಿಂದೆ ಬೀಳುತ್ತಾರೆ ಎನ್ನುವ ಭೀತಿ ಹುಟ್ಟಿಸಿದ್ದಾರೆ. ಈಗ ಇರುವುದು ಎರಡು ವಿವಾದಗಳು.

ಮಕ್ಕಳಿಗೆ ಶಾಲೆಗಳಲ್ಲಿ ಶಿಕ್ಷಣ ಮಾಧ್ಯಮ ಯಾವುದಾಗಬೇಕು? ಮೊದಲನೇ ತರಗತಿಯಿಂದಲೇ ಇಂಗ್ಲಿಷ್ ಮಾಧ್ಯಮವಾಗಬೇಕೆ ಅಥವಾ ರಾಜ್ಯಭಾಷೆ ಮಾಧ್ಯಮವಾಗಬೇಕೆ? ರಾಜ್ಯ ಭಾಷೆಯ ಇರಬೇಕು ಎನ್ನುವುದಾದರೆ ಯಾವ ತರಗತಿಯವರೆಗೂ ಇರಬೇಕು? ಮತ್ತು ಯಾವ ತರಗತಿಯಿಂದ ಇಂಗ್ಲಿಷ್ ಮಾಧ್ಯಮಕ್ಕೆ ಬದಲಾಗಬೇಕು?

ಈಗ ಇಂಗ್ಲಿಷನ್ನು ಒಂದು ಭಾಷೆಯನ್ನಾಗಿ ತರಗತಿಯಿಂದ ಹೇಳಿ ಕೊಡಬೇಕು? ಒಂದನೇ ತರಗತಿಯಿಂದಲೇ ಇದು ನ್ಯಾಯಾಲಯ ಇತ್ತೀಚೆಗೆ ಹುಟ್ಟುಹಾಕಿರುವ ವಿವಾದ.

ನಾವು ಏನೇ ಹೇಳಿದರೂ ಮಕ್ಕಳ ಮನೋವಿಜ್ಞಾನ ಮತ್ತು ಭಾಷಾ ವಿಜ್ಞಾನಗಳು ಕೊಟ್ಟಿರುವ ಸಿದ್ಧಾಂತಗಳ ಆಧಾರದ ಮೇಲೆ ಹೇಳಬೇಕಾಗುತ್ತದೆ ಹೊರತು ಇಂಗ್ಲಿಷ್ ಅಥವಾ ಕನ್ನಡ ಭಾಷೆಗಳ ಮೇಲಿನ ಭಾವುಕತೆಯಿಂದಾಗಲಿ ಅಥವಾ ಇಂಗ್ಲಿಷ್ ಅಂತರರಾಷ್ಟ್ರೀಯ ಭಾಷೆ ಅಥವಾ ವಿಶ್ವ ಭಾಷೆ ಎಂದಾಗಲಿ ಮಾತನಾಡಲೂ ಅವಕಾಶವಿಲ್ಲ. ಅಥವಾ ಮಾರುಕಟ್ಟೆಯ ಒತ್ತಡಗಳನ್ನು ಗಮನದಲ್ಲಿಟ್ಟುಕೊಂಡು ಮಾತನಾಡಲು ಸಾಧ್ಯವಿಲ್ಲ. ಭಾವುಕತೆ ಸಮಸ್ಯೆಯನ್ನು ಬಗೆಹರಿಸುವುದಿಲ್ಲ. ಮಕ್ಕಳ ಸೃಜನಶೀಲತೆಯನ್ನು ಅರಳಿಸುವುದು ನಮ್ಮ ಮೊದಲ ಜವಾಬ್ದಾರಿಯಾಗಬೇಕು. ಭಾಷಾ ವಿಜ್ಞಾನಿಗಳಿಗೆ ಇಂಗ್ಲಿಷಿನ ಶಕ್ತಿ ಏನು ಮತ್ತು ಅದರ ಸ್ಥಾನಮಾನಗಳೇನು ಎನ್ನುವುದು ಚೆನ್ನಾಗಿ ಗೊತ್ತಿದೆ.

ಕರ್ನಾಟಕವೇ ಭಾರತವಲ್ಲ; ಭಾರತವೇ ಜಗತ್ತಲ್ಲವೆಂಬ ವಾಸ್ತವತೆಯೊಂದಿಗೆ ಚಿಂತಿಸಿದಲ್ಲಿ 'ಜಗತ್ತಿನ ಕಿಂಡಿ' ಎಂದೇ ಕರೆಯಲ್ಪಡುತ್ತಿರುವ ಇಂಗ್ಲಿಷ್ ಭಾಷೆಯ ಪ್ರಭುತ್ವ ಇಂದು ಪ್ರತಿಯೊಬ್ಬರಿಗೂ ಅನಿವಾರ್ಯ. ಈ ಭಾಷಾ ಪ್ರಭುತ್ವಗಳಿಸಲು ಇದುವರೆಗಿನ ಸರ್ಕಾರಿ ಶಾಲೆಗಳ ಐದನೆಯ ತರಗತಿಯಿಂದ ಕಲಿಕೆಯಾಗುತ್ತಿದ್ದರೂ ಸಾಧ್ಯವಾಗದಿರುವುದು ಸಮನಕಾಲೀನ ಸತ್ಯ ಎಂತಲೇ ಖಾಸಗಿ ಶಾಲೆಗಳಲ್ಲಿ ನ್ಯಾಯಾಂಗದ ತೀರ್ಪನ್ನೂ ಲೆಕ್ಕಿಸದೆ ಪೂರ್ವ ಪ್ರಾಥಮಿಕ ಹಂತದಿಂದಲೇ ಇಂಗ್ಲಿಷ್ ಕಲಿಕೆಯಾಗುತ್ತಿದೆ. ಇದಕ್ಕೆ ವ್ಯಾಪಕವಾದ ಜನಬೆಂಬಲವೂ ದೊರೆತಿರುವುದು ಗಮನಾರ್ಹ ಸಂಗತಿಯೇ! ಹಳ್ಳಿಹಳ್ಳಿಗಳಲ್ಲೂ ಕಾನ್ವೆಂಟ್ ಶಾಲೆಗಳು ಪ್ರಾರಂಭವಾಗುತ್ತಿದ್ದು ಕನ್ನಡದ ಸರ್ಕಾರಿ ಶಾಲೆಗಳೇನಿದ್ದರೂ ಕೆಳಮಧ್ಯದ ಹಾಗೂ ಕೆಳವರ್ಗದ ಅಸಹಾಯಕರಿಗೆ ಮಾತ್ರ ಎನ್ನುವಂತಾಗಿದೆ.

ಸರ್ಕಾರಿ ಶಾಲೆಗಳ ಅಸಹಾಯಕ ವರ್ಗ ಹಾಗೂ ಕಾನ್ವೆಂಟ್ ಶಾಲೆಗಳ ಮಧ್ಯಮ ಹಾಗೂ ಮೇಲ್ಮಧ್ಯಮ ವರ್ಗಗಳ ನಡುವೆ ಸಾಮಾಜಿಕ ನ್ಯಾಯದ ಪ್ರಶ್ನೆ ಕೇವಲ ಕನಸಾದೀತು. ಅಲ್ಲದೇ 'ಸಾರ್ವಜನಿಕ ಶಿಕ್ಷಣ ಇಲಾಖೆ' ಕೇವಲ ನಿರ್ಗತಿಕರ ಪಾಲಾಗಿ 'ಸ್ಪರ್ಧಾ ಜಗತ್ತಿ'ನೊಳಗೂ ಪ್ರವೇಶಿಸಲೂ ಬಾರದ ಅಶಕ್ತರನ್ನು ಉತ್ಪಾದಿಸುವ ಕಾರಖಾನೆಯಾದೀತು. ಈ ನಿಟ್ಟಿನಲ್ಲಿ ಕನ್ನಡದ ಜೊತೆಗೆ 'ಇಂಗ್ಲಿಷೂ

ಸತ್ಯ; ನಿತ್ಯ'ವೆಂಬುದನ್ನು ಕನ್ನಡದ ಮೂಲಭೂತವಾದಿಗಳು ಅರಿಯಬೇಕಾದ ಜರೂರಿದೆ.

ನಾವು ಕನ್ನಡ ಭಾಷೆಯ ಅಭಿವೃದ್ಧಿಯ ಬಗ್ಗೆ ಚರ್ಚೆ ಆರಂಭಿಸಿ ನೂರು ವರ್ಷವಾದರೂ ಇಂಜಿನಿಯರಿಂಗ್, ಮೆಡಿಕಲ್ ಹಾಗೂ ಇನ್ನಿತರ ಅನೇಕ ಉನ್ನತ ವಿಜ್ಞಾನಗಳನ್ನು ಇವತ್ತಿಗೂ ಕನ್ನಡದಲ್ಲಿ ಬೋಧಿಸುತ್ತಿಲ್ಲ. ಲಕ್ಷಾಂತರ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಪ್ರತಿ ವರ್ಷ ಬರೆಯುವ ಸಿಇಟಿ ಪರೀಕ್ಷೆ ಕನ್ನಡದಲ್ಲಿ ನಡೆಯುತ್ತಿಲ್ಲ. ಕಳೆದ ಹತ್ತು ವರ್ಷಗಳಲ್ಲಿ ನಮ್ಮ ವಿಶ್ವವಿದ್ಯಾಲಯಗಳಲ್ಲಿ ಆರಂಭಗೊಂಡಿರುವ ಹತ್ತಾರು ಹೊಸ ಸ್ನಾತಕ-ಸ್ನಾತಕೋತ್ತರ ಕೋರ್ಸುಗಳು ಕನ್ನಡದಲ್ಲಿ ಬೋಧಿಸುತ್ತಿಲ್ಲ. ಹೀಗಾಗಿ ತಡವಾಗಿ ಇಂಗ್ಲಿಷ್ ಕಲಿತ ಹಳ್ಳಿ ಮಕ್ಕಳು ಈ ಕಾಲದಲ್ಲಿ ಉದ್ಯೋಗ ತರುವ ಹೊಸ ಕೋರ್ಸುಗಳಿಗೆ ಪ್ರವೇಶಿಸದಂಥ ಸ್ಥಿತಿ ನಿರ್ಮಾಣವಾಗಿದೆ. ಕಳೆದ ವರ್ಷ ಇಂಜಿನಿಯರಿಂಗ್ ಕಾಲೇಜೊಂದನ್ನು ಸೇರಿರುವ ನೂರು ವಿದ್ಯಾರ್ಥಿಗಳನ್ನು ಸಂದರ್ಶಿಸಿ ಪಡೆದಿರುವ ಅಂಕಿ-ಅಂಶಗಳ ಪ್ರಕಾರ, ಈ ನೂರು ವಿದ್ಯಾರ್ಥಿಗಳಲ್ಲಿ ಕೇವಲ ಐದು ಜನ ಮಾತ್ರ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಓದಿ ಹತ್ತನೆಯ ವಯಸ್ಸಿನಿಂದ ಇಂಗ್ಲಿಷ್ ಕಲಿತವರಾಗಿದ್ದಾರೆ. ಇನ್ನುಳಿದ ೯೫ ಜನ ಮೂರನೆಯ ವಯಸ್ಸಿಗೆ ಇಂಗ್ಲಿಷ್ ಕಲಿತಿದ್ದಾರೆ. ಆದ್ದರಿಂದ ಕನ್ನಡ ಮಾಧ್ಯಮದಲ್ಲಿ ಕಲಿತ ಮಕ್ಕಳೂ ಹೆಚ್ಚಿನ ಸಂಖ್ಯೆಯಲ್ಲಿ ವೃತ್ತಿಶಿಕ್ಷಣ, ಉನ್ನತ ಶಿಕ್ಷಣ ಹಾಗೂ ಉದ್ಯೋಗ ತರುವ ಹೊಸ ಕಾಲದ ಶಿಕ್ಷಣಗಳನ್ನು ಪ್ರವೇಶಿಸಲು ಅವರಿಗೂ ಬಾಲ್ಯದಲ್ಲೇ ಇಂಗ್ಲಿಷ್ ಕಲಿಸಬೇಕು. ಇದೊಂದು ಆರ್ಥಿಕ ಪ್ರಶ್ನೆಯಾದ್ದರಿಂದ ಇದನ್ನು ಪ್ರತಿಷ್ಠೆಯ ಭಾವುಕ ಪ್ರಶ್ನೆಯನ್ನಾಗಿ ಮಾಡಬಾರದು. ಕನ್ನಡ ಮಾಧ್ಯಮದಲ್ಲಿ ಓದಿರುವ ವಿದ್ಯಾರ್ಥಿಗಳಿಗೆ ನಮ್ಮ ಸರ್ಕಾರಿ ಹಾಗೂ ಖಾಸಗಿ ವಲಯಗಳಲ್ಲಿ ಅವರ ಬೃಹತ್ ಸಂಖ್ಯೆಗನುಗುಣವಾಗಿ ಶೇ. ೫೦ ಮೀಸಲಾತಿ ಇದ್ದಿದ್ದರೆ ಅಥವಾ ಕನ್ನಡ ಭಾಷೆ ಆಧುನಿಕ ಮಾರುಕಟ್ಟೆಯ ನಿಯಂತ್ರಕ ಭಾಷೆಯಾಗಿದ್ದರೆ ಇವತ್ತು ಯಾರೂ ಇಂಗ್ಲಿಷಿಗೆ ಮುಂಬಾಲು ಬೀಳುತ್ತಿರುಲಿಲ್ಲ.

ಹಿಂದೊಮ್ಮೆ ಹತ್ತನೆಯ ವಯಸ್ಸಿಗೆ ಇಂಗ್ಲಿಷ್ ಕಲಿಸಬೇಕೆಂದು ಹೇಳುತ್ತಿದ್ದ ಖ್ಯಾತ ಶಿಕ್ಷಣ ತಜ್ಞ ರೋಹಿಡೇಕರ್ ಅವರೇ ಈ ಹೊಸ ವಾಸ್ತವವನ್ನು ಅರಿತು ಈಗ ತಮ್ಮ ಹಳೆಯ ನಿಲುವನ್ನು ಬದಲಿಸಿಕೊಂಡು, ಪ್ರಾಥಮಿಕ ಹಂತದಿಂದಲೇ ಇಂಗ್ಲಿಷ್ ಕಲಿಸಬೇಕೆಂದು ಹೇಳುತ್ತಿದ್ದಾರೆ. ಕನ್ನಡದ ಶ್ರೇಷ್ಠ ಸಂಶೋಧಕರು, ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಮಾಜಿ ನಿರ್ದೇಶಕರೂ ಆದ ಡಾ|| ಎಂ. ಚಿದಾನಂದಮೂರ್ತಿಯವರೇ ತಮ್ಮ ಮಕ್ಕಳು ಈ ಕಾಲದ ಸ್ಪರ್ಧೆಯಲ್ಲಿ ಹಿಂದೆ ಬೀಳಬಾರದೆಂದು ಅವರನ್ನು ಇಂಗ್ಲಿಷ್ ಮಾಧ್ಯಮದ ಶಾಲೆಗೇ ಕಳಿಸಿದ್ದಾರೆ. ಮಾತೃಭಾಷೆಯ ಅಗತ್ಯದ ಬಗ್ಗೆ ಈಚೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಧಾರಾಳವಾಗಿ ಉಪನ್ಯಾಸ ಕೊಡುತ್ತಿರುವ 'ಮನೋವಿಜ್ಞಾನಿ' ಶ್ರೀಧರ್ ಅವರೇ ತಮ್ಮ ಮಗನನ್ನು ಪ್ರತಿಷ್ಠಿತ ಕುಮರನ್ಸ್ ಇಂಗ್ಲಿಷ್ ಮಾಧ್ಯಮ ಶಾಲೆಯಲ್ಲಿ ಓದಿಸಿದ್ದಾರೆ. ಅಷ್ಟೇ ಅಲ್ಲ, ಕರ್ನಾಟಕದಲ್ಲಿ ಈಗ ಎಲ್ಲ ವಿಶ್ವವಿದ್ಯಾಲಯಗಳ, ಹೈಸ್ಕೂಲುಗಳ ಹಾಗೂ ಕಾಲೇಜುಗಳ ಶೇ. ೯೯ ಅಧ್ಯಾಪಕ, ಅಧ್ಯಾಪಕಿಯರು ತಮ್ಮ ಮಕ್ಕಳನ್ನು ಇಂಗ್ಲಿಷ್ ಮಾಧ್ಯಮದ ಶಾಲೆಗೇ ಕಳಿಸುತ್ತಿದ್ದಾರೆ. ಈ ಮಹನೀಯರು ಮತ್ತು ಮಹಿಳೆಯರು ಮಾದರಿಯನ್ನು ಗ್ರಾಮೀಣ ಮಕ್ಕಳು ಯಾಕೆ ಅನುಸರಿಸ ಬಾರದು? ಇಂಗ್ಲಿಷಿನ ಯಜಮಾನಿಕೆಯಿರುವ ಪಶ್ಚಿಮದಲ್ಲೇ ಈಚಿನ ವರ್ಷಗಳಲ್ಲಿ ಇತರ ಮಾತೃಭಾಷೆಗಳನ್ನು ಕಲಿಸಲು ಪೋಷಕರು ಹಾತೊರೆಯುತ್ತಿದ್ದಾರೆ. ಎರಡು ಮೂರು ಭಾಷೆ ಕಲಿಯಲು ಮಕ್ಕಳ ಮನೋ ಲೋಕದಲ್ಲಿ ಯಾವ ತಡೆಯೂ ಇಲ್ಲ ಎಂದು ಖ್ಯಾತ ಮನೋವಿಜ್ಞಾನಿ, ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿ ಡಾ|| ಎಂ.ಎಸ್. ತಿಮ್ಮಪ್ಪನವರೇ ಈಚೆಗೆ ಹೇಳಿದ್ದಾರೆ. ಭಾಷಾ ಕಲಿಕೆ ಹಾಗೂ ಭಾಷಾ ವಿಜ್ಞಾನದ ನಿಯಮಗಳು ಹೊಸ ಕಾಲದ ಅಗತ್ಯಗಳ ಹಿನ್ನೆಲೆಯಲ್ಲಿ ಬದಲಾಗುತ್ತಿರುತ್ತ ಎಂಬುದು ನಾವು

ಕಳೆದ ಹತ್ತು ವರ್ಷಗಳ ಮಕ್ಕಳ ಕಲಿಕೆಯ ವೇಗವನ್ನು ಗಮನಿಸಿದರೂ ಅರಿವಾಗುತ್ತದೆ. ಅದರಲ್ಲೂ ಐದು-ಆರನೆಯ ವಯಸ್ಸಿಗೇ ಕಂಪ್ಯೂಟರ್ ಭಾಷೆಯನ್ನು ಕಲಿಯುತ್ತಿರುವ ನಗರ, ಪಟ್ಟಣಗಳ ಮಕ್ಕಳ ಪ್ರಚಂಡ ವೇಗವನ್ನು ಗಮನಿಸಿದರೆ, ಭಾಷಾ ಕಲಿಕೆ ಕುರಿತ ನಮ್ಮ ಹಳೆಯ ತುಕ್ಕು ಹಿಡಿದ ಸಿದ್ಧಾಂತಗಳು ತಲೆಕೆಳಗಾಗಿರುವುದು ಗೊತ್ತಾಗುತ್ತದೆ. ಆದ್ದರಿಂದ ಹಳ್ಳಿಯ ಮಕ್ಕಳಿಗೆ ಈ ಬಗೆಯ ಕಲಿಕೆಯ ಶಕ್ತಿ ಇಲ್ಲ ಎಂದು ತೀರ್ಮಾನಿಸುವುದು ಶುದ್ಧ ಅವಾಸ್ತವವಾಗುತ್ತದೆ.

ಈ ಗುರಿಯನ್ನು ಮಾತೃಭಾಷಾ ಮಾಧ್ಯಮದಲ್ಲೇ ಕಲಿತು, ಮಾತೃಭಾಷೆಯನ್ನು ಉಳಿಸಿ, ಬಳಸಿ ಬೆಳೆಸುತ್ತಿರುವ ಬಡ ದಲಿತ, ಹಿಂದುಳಿದ, ರೈತ ಹಾಗೂ ಎಲ್ಲಾ ಜಾತಿಯ ನಿರ್ಗತಿಕ ಮಕ್ಕಳಿಗೆ ಇಂಗ್ಲಿಷ್ ಪರಿಚಯಿಸುವುದಕ್ಕೆ ಈ ಆಂದೋಲನವು ಅಡ್ಡಿಯಾಗಬಾರದು. ನಮಗೆ ಇಂಗ್ಲಿಷ್ ಭಾಷೆ ಪ್ರಾಥಮಿಕ ಒಂದನೇ ತರಗತಿಯಿಂದಲೇ ಬೇಕು. ಭಾಷೆ ಬೇರೆ, ಮಾಧ್ಯಮ ಬೇರೆ ಎಂಬುದನ್ನು ಅರಿಯಬೇಕು. ಪ್ರಾಥಮಿಕ ಶಿಕ್ಷಣದಲ್ಲಿಯೇ ಇಂಗ್ಲಿಷ್ (೧ನೇ ತರಗತಿ) ಶಿಕ್ಷಣ ಇದ್ದರೆ ಉದ್ಯೋಗಾವಕಾಶಗಳು ವಿಪುಲವಾಗುತ್ತವೆ. ಕನ್ನಡ ಮಾಧ್ಯಮ-ಇಂಗ್ಲಿಷ್ ಭಾಷೆ ನಮ್ಮ ಗುರಿಯಾಗಬೇಕು.

---

೨ನೇ ಕ್ರಾಸ್, ಗಣೇಶ ಕಾಲನಿ
ಜನ್ನಾಪುರ, ಭದ್ರಾವತಿ - ೫೭೭ ೩೦೧

## ಚಂದಾದಾರರಲ್ಲಿ ಒಂದು ಮಾತು

- ಎಂ.ಓ. ಮೂಲಕ ಚಂದಾ ಕಳುಹಿಸುವವರು ಕೌಂಟರ್ ಫಾಯಿಲ್‌ನಲ್ಲಿ ತಪ್ಪದೆ ನಿಮ್ಮ ಹೆಸರು, ವಿಳಾಸ ಬರೆಯಿರಿ. ಹೊರ ಊರಿನ ಚೆಕ್ ಕಳುಹಿಸುವವರು ರೂ. ೨೦/- ಹೆಚ್ಚಿಗೆ ಕಳುಹಿಸಿ. *'ಸಂಚಯ'*ದ ಹೆಸರಿಗೆ ನಿಮ್ಮ ಚೆಕ್, ಡಿ.ಡಿ. ಕಳುಹಿಸಬಹುದು.
- ನಿಮ್ಮ ವಿಳಾಸ ಬದಲಾದಲ್ಲಿ ದಯವಿಟ್ಟು ಒಂದು ಕಾರ್ಡು ಹಾಕಿ. ನಮ್ಮ ಸಮಯ, ಶ್ರಮ ಸುರಿದು ರೂಪಿಸಿದ ಪತ್ರಿಕೆಯ ಪ್ರತಿಗಳು ವ್ಯರ್ಥ ವಾಪಸ್ಸಾಗುವುದು, ಬೇಡದ ಜಾಗಗಳಲ್ಲಿ ಕೊಳೆಯುವುದು ಬೇಡ.
- ಪುಸ್ತಕ ವಿಮರ್ಶೆ/ಪರಿಚಯಕ್ಕೆ ಎರಡು ಪ್ರತಿಗಳನ್ನು ಕಳುಹಿಸಿ.
- ನಿಮ್ಮ ಸ್ನೇಹಿತರನ್ನು, ಗೆಳೆಯರನ್ನು ಆಸಕ್ತಿ ಇರುವವರನ್ನು ಸಂಚಯಕ್ಕೆ ಚಂದಾದಾರರನ್ನಾಗಿ 'ಸಂಚಯ ಸ್ನೇಹವಲಯ' ವಿಸ್ತರಿಸಿ.
- ನಿಮ್ಮ ಬರಹಗಳು ಮತ್ತು ಸಂಚಯ ಕುರಿತ ಅನಿಸಿಕೆ ಅಭಿಪ್ರಾಯಗಳಿಗೆ ಸ್ವಾಗತವಿದೆ.

# ಸಂಕಿರಣ - ೭

**ಶ್ರೀ ವಸಂತ ಅನಂತ ದಿವಾಣಜಿ** (ಕುಸುಮಾಕರ ದೇವರಗೆಣ್ಣೂರ) ಅವರು (೧೯೩೦) ಬಿಜಾಪುರ ಜಿಲ್ಲೆಯ ದೇವರಗೆಣ್ಣೂರಿನವರು. ಬಾಲ್ಯ ಕಾಲದ ಕಡುಬಡತನದ ಆದರ್ಶಮಯ ಮನೆಯ ವಾತಾವರಣದ ನಡುವೆ ಬೆಳೆದ ಕುಸುಮಾಕರರ ವಿದ್ಯಾಭ್ಯಾಸ ಬೇರೆ ಬೇರೆ ಊರುಗಳಲ್ಲಾಯಿತು. ಅವರ ಬದುಕಿನಲ್ಲಿ ಸೊಲ್ಲಾಪುರ ಮತ್ತು ಬೇಂದ್ರೆಯವರ ಪಾತ್ರ ಬಹಳ ಮುಖ್ಯವಾದದ್ದು. ಸುಮಾರು ಹನ್ನೆರಡು ವರ್ಷಗಳ ಕಾಲ ಬೇಂದ್ರೆಯವರ ಸಹವಾಸದಲ್ಲಿ ಬೆಳೆದ ಕುಸುಮಾಕರರಿಗೆ ದ. ರಾ. ಬೇಂದ್ರೆ ಅವರ ಚಿಂತನೆ ಹಾಗೂ ಸೃಜನಶೀಲತೆಯನ್ನು ಪ್ರಭಾವಗೊಳಿಸಿದೆ. ಆದರೆ ಭಾರತೀಯ ಲೇಖಕರನ್ನು ಓದಿ ಅಪಾರ ನಿರಾಸೆಗೂ ಒಳಗಾಗಿರುವ ಅವರು ಪೂರ್ವ ಮತ್ತು ಪಶ್ಚಿಮದ ಅಧ್ಯಾತ್ಮ ಮತ್ತು ಮನಶ್ಶಾಸ್ತ್ರದ ಕ್ಷೇತ್ರದ ಚಿಂತಕರನ್ನ ಆಳವಾಗಿ ಅಧ್ಯಯನ ಮಾಡಿದ್ದಾರೆ. ಅವರ ಜೊತೆಗೆ ಮುಕ್ತವಾದ ಸಾಹಿತ್ಯದ 'ಮಾತು' ಒಂದು ವಿಶಿಷ್ಟ ಅನುಭವ. ಕಾದಂಬರಿಗಳ ಪ್ರಕಾರದ ಬಗ್ಗೆ ಅಪರೂಪದ ಶ್ರದ್ಧೆಯಿಂದ, ವ್ಯಕ್ತಿಯನ್ನು ಕೇಂದ್ರವಾಗಿ ಇಟ್ಟುಕೊಂಡು ಅವನ ಅಂತರಂಗದ ಜಗತ್ತಿನ ಒಳಪದರಗಳನ್ನು ಅತ್ಯಂತ ಸಂಯಮ ಮತ್ತು ನಿರುದ್ವಿಗ್ನತೆಯಿಂದ ಶೋಧಿಸಿರುವ ಅವರ ಬರಹಗಳು ಅನನ್ಯ ಹಾಗೂ ವಿಶಿಷ್ಟವಾದವು. ನಮ್ಮ ಕಾದಂಬರಿ ಕ್ಷೇತ್ರಕ್ಕೆ ಕೊಟ್ಟ ಅಪೂರ್ವ ಜಗತ್ತು.

ಸ್ವಪ್ನ ನೌಕೆ (೧೯೫೪) ಕವನಸಂಕಲನ. ಮುಗಿಯದ ಕತೆ (೧೯೬೫). ನಾಲ್ಕನೆಯ ಆಯಾಮ (೧೯೬೬). ನಿರಿಂದ್ರಿಯ (೧೯೯೩). ಶಪಥ (೧೯೯೫). ಬಯಲು-ಬಸಿರು (೨೦೦೫) ಮೊದಲಾದ ಕಾದಂಬರಿಗಳು. ಜೊತೆಗೆ ದಾಸ ಸಾಹಿತ್ಯ ಕುರಿತ ಅವರ ಮಹಾಪ್ರಬಂಧ 'ಪ್ರಸಾದ ಯೋಗ' (೧೯೬೭) ಪ್ರಕಟಗೊಂಡಿದೆ. ಜೊತೆಗೆ ಗುರುದಕ್ಷಿಣೆ ಬೇಂದ್ರೆ ಸಾಹಿತ್ಯ ಸಮೀಕ್ಷೆ ಮೊದಲಾದವು ಅವರ ಕೃತಿಗಳ ಸಮೂಹ.

ಪತ್ರಿಕೆಯಿಂದ ಇದ್ದೂ ದೂರವಾಗುಳಿದ ದೇವರಗೆಣ್ಣೂರರು ನಮ್ಮ ಸಾಹಿತ್ಯ ವಿಮರ್ಶೆಯ ಜಾಣ ಕುರುಡುತನಕ್ಕೆ ಈಡಾದವರು. ಅವರ ಸಾಹಿತ್ಯ ಕುರಿತು ಚರ್ಚಿಸುವ ಮೂಲಕ ಸಂಕಿರಣ ಮತ್ತೊಮ್ಮೆ ಮರುಹುಟ್ಟು ಪಡೆದಿದೆ ಯಾಪತ್ತಿನಂತೆ ಮುಕ್ತವಾದ ಚರ್ಚೆಗೆ ತೆರೆದುಕೊಂಡಿದೆ.













# ನಾಲ್ಕನೆಯ ಆಯಾಮ

✦ ಎಂ.ಆರ್. ಭಗವತಿ

ಹಲವು ಆಯಾಮಗಳಲ್ಲಿ ಅವನ ಬದುಕು ವ್ಯಕ್ತವಾಗುತ್ತದೆ. ಎಲ್ಲಾ ಆಯಾಮಗಳಲ್ಲೂ ಆತ ಅನುಕಂಪಕ್ಕೆ ಮೊರೆಹೋಗುತ್ತಾನೆ, ದ್ವಂದ್ವಕ್ಕೆ ಒಳಗಾಗುತ್ತಾನೆ; ತನ್ನ ಸುತ್ತಲಿನವರನ್ನು ನರಳಿಸುತ್ತಾನೆ, ತಾನೂ ನರಳುತ್ತಾನೆ. ಬದುಕಿನ ವಿವಿಧ ಹಂತಗಳನ್ನು ಅನುಭವಿಸುವಾಗ ಅವನ ಸೋಲಿಗೆ ನಾಲ್ಕು ಮುಖ್ಯ ಕಾರಣಗಳು ವ್ಯಕ್ತವಾಗುತ್ತವೆ: ಸ್ವಯಂಕೃತ ಅಪರಾಧ, ಅನುಕರಣೆ, ಭಯ ಮತ್ತು ಮುಖವಾಡ. ಪರಿಣಾಮ: ತಾನು ಸರಿಯಿಲ್ಲ, ಎಲ್ಲರೂ ಚೆನ್ನಾಗಿದ್ದಾರೆ. ತನ್ನ ತಪ್ಪಿಗೆ – ಈಗಿನ ಸ್ಥಿತಿಗೆ ಅವರೇ ಕಾರಣ ಎನ್ನುವ ಸ್ವಯಂ ಹೇರಿಕೆಯಿಂದ ಆತ್ಮತೃಪ್ತಿಯನ್ನು ಕಾಣುತ್ತಾನೆ. ಸಮಸ್ಯೆಯ ಮೂಲ ಬೇರನ್ನು ಕಡಿದುಕೊಳ್ಳಲು ಹರಸಾಹಸ ಪಡುತ್ತಾನೆ. ''ಇದು ಚಕ್ರವ್ಯೂಹ. ಒಳಗೆ ಬರುವ ಹಾದಿ ಗೊತ್ತು'' ಎನ್ನುವ ಹಾಗೆ ಇನ್ನೇನು ಸಾಧಿಸಿಬಿಟ್ಟೆ ಎನ್ನುವಾಗಲೇ ಮೂಲ ಸ್ಥಿತಿಗೆ ಹೊರಳಿ ನಿರಾಸೆ ಮೂಡಿಸುತ್ತಾನೆ. ತನ್ನ ಕೃತ್ಯಗಳನ್ನು ತಾನೇ ಬೆಂಬಲಿಸಿ ಸ್ವಯಂ ತೃಪ್ತಿಯನ್ನು

ಅನುಭವಿಸುವುದರಿಂದ ಏನಾಗಬೇಕೆಂಬ ಸ್ಥಿರ ಮಾದರಿ ಅವನ ಮುಂದೆ ಇರದೆ ಕೇರೆ ಹಾವಿನಂತೆ ಹೊರಳಾಡುತ್ತಾನೆ.

ಅಪ್ಪಟ ಮನಶಾಸ್ತ್ರದ ಕಾದಂಬರಿಯಂತೆ ಕಂಡರೂ, ಎಲ್ಲೂ ತರ್ಕವೇ ತುಂಬಿದಂಥ ಶುಷ್ಕತೆ ಇಲ್ಲ. ನಿರಾಭರಣ ಸೌಂದರ್ಯಲಹರಿ ನಮ್ಮ ಮುಂದೆ ಹರಿದರೆ ಆಶ್ಚರ್ಯವಿಲ್ಲ... ಕುಸುಮಾಕರ ದೇವರಗೆಣ್ಣೂರರ 'ನಾಲ್ಕನೆಯ ಆಯಾಮ' ಕಾದಂಬರಿ ಓದುವಾಗ ಹೀಗನ್ನಿಸುತ್ತದೆ.

ಈ ಎಲ್ಲವನ್ನೂ ವರ್ಣಿಸುವಾಗ ಕಾದಂಬರಿಕಾರರ ಜಾಣತನ, ಸತ್ಯಾಸತ್ಯತೆಯನ್ನು ಒರೆಗೆ ಹಚ್ಚುವ ಸೂಕ್ಷ್ಮತನ ಕಾದಂಬರಿಯಲ್ಲಿ ಅದ್ಭುತವಾಗಿ ವ್ಯಕ್ತವಾಗಿದೆ. ಒಬ್ಬ ವ್ಯಕ್ತಿಯ ವ್ಯಕ್ತಿತ್ವದ ಪಯಣವೂ ಹೌದು (transformation of self), ಉನ್ನತಿಯೂ ಹೌದು, ಅವನತಿಯೂ ಹೌದು! ಒಬ್ಬ ವ್ಯಕ್ತಿಯ ಮನಸ್ಥಿತಿಯನ್ನೇ ಶಾಂತ ರೀತಿಯಲ್ಲಿ ಅರ್ಥ ಮಾಡಿಕೊಳ್ಳುವ ರೀತಿಯೂ ಹೌದು. ಪ್ರಜ್ಞಾಪ್ರವಾಹದ ಮೂಲಕ ಮಾನಸಿಕ ಹಿನ್ನೆಲೆಯನ್ನು ಕೆದಕುವ, ಕತೆ ಹೇಳುವ ಲೇಖಕರ ಜಾಣ್ಮೆ ಯಶಸ್ವಿಯಾಗಿದೆ. ನಾಯಕನ ಮನಸ್ಸಿನ ಮೂಲೆಯನ್ನೂ ಸೂಕ್ಷ್ಮವಾಗಿ ಕೆರಳಿಸಿ, ಅವನ ಪ್ರತಿಯೊಂದು ಭಾವನೆಯನ್ನೂ ಅಚ್ಚುಕಟ್ಟಾಗಿ ಅರ್ಥಮಾಡಿಸುವ ರೀತಿ ಸೊಗಸಾಗಿದೆ. ಕನಸುಗಳು ನಮ್ಮ ಸುಪ್ತಾವಸ್ಥೆಯ ಕನ್ನಡಿ ಎಂಬುದು ನಮಗೆ ಗೊತ್ತೇ ಇದೆ. ಕನಸುಗಳ ಮೂಲಕ ಅವನ ಒಳ ತುಮುಲಗಳನ್ನು ಬಿಂಬಿಸುವ ಚಿತ್ರ ಕಾದಂಬರಿಯುದ್ದಕ್ಕೂ ನಮಗೆ ಕಾಣುತ್ತದೆ.

'ಹಾವಿನ ಕತ್ತನ್ನು ಹಿಸುಕಿ ಅದರಿಂದ ವಿಷವನ್ನು ಕಕ್ಕಿಸುವಂತೆ ಇದರಿಂದ ಯಾವ ಸಂದೇಶವನ್ನು ಕಕ್ಕಿಸಿಲ್ಲ.' ನಾಯಕನ ಸ್ನೇಹಿತನ ಪಾತ್ರಧಾರಿ ಇದಕ್ಕೆ ಉತ್ತಮ ಉದಾಹರಣೆಯಾಗಿ ನಿಲ್ಲುತ್ತಾನೆ. ಆತ ಯಾವುದೇ ತೀರ್ಮಾನ ಕೊಡುವುದಿಲ್ಲ. ಆದರೆ ಆತನ ವರ್ತನೆಯಿಂದಲೇ ಅವನ ಅಭಿಪ್ರಾಯ ವ್ಯಕ್ತವಾಗಿರುತ್ತದೆ. ಅದಕ್ಕೆ ಸೂಕ್ಷ್ಮ ಒಳಗಣ್ಣು ಬೇಕು! ಅಂಥ ಅಲಿಪ್ತತನ. ಕಾದಂಬರಿ ಓದುವಾಗ ಮಧ್ಯದಲ್ಲಿ ಅವನ್ನು ಕಳಗಿಟ್ಟರೆ ಅದರ ಸೊಗಡು ಎಲ್ಲಿ ಕಾಣೆಯಾಗುವುದೋ ಎನ್ನುವ ಭಾವ ನಮ್ಮನ್ನು ಕಾಡುತ್ತದೆ.

ಭಾವನೆಯಲ್ಲಿ, ಬದುಕಿನ ತಿಳುವಳಿಕೆಯಲ್ಲಿ ಸ್ಥಿರತೆ ಇಲ್ಲದಿರುವಾಗ ಮನಸ್ಸು ಹೊರ ಮಾರ್ಗಗಳನ್ನು ಕಂಡುಕೊಳ್ಳುತ್ತದೆ. ಯಾವುದನ್ನೂ ಅಪ್ಪಿಕೊಳ್ಳಲಾಗದ ದ್ವಂದ್ವ ಅನುಸರಿಸುತ್ತದೆ. ನಾಯಕನಿಗಾದದ್ದೂ ಅದೇ. ತಂದೆಯ ಅಪೇಕ್ಷೆಯಂತೆ ನಡೆಯಲು ಆಗದು, ಒಳ್ಳೆಯ ಸ್ನೇಹಿತನ ಸಹವಾಸದಲ್ಲಿರುವಾಗ, ಭಾವನೆಯಲ್ಲಿ ಬದಲಾದಂತೆ ಕಂಡರೂ ಅವನ ಅನುಪಸ್ಥಿತಿಯಲ್ಲಿ ಮೂಲ ಭಾವನೆಗಳಿಗೆ ಹೊರಳಿ ದ್ವಂದ್ವ ಅನುಭವಿಸುತ್ತಾನೆ. ಕೊನೆಗೂ ತಂದೆಯ ಮಾತಿನಂತೇ ಕೈಲಾಗದವನಂತೇ ವರ್ತಿಸುತ್ತಾ ಮೂಲ ಭಾವನೆಯ ಸಿಕ್ಕುಗಳಿಂದ ಬಿಡಿಸಿಕೊಳ್ಳಲು ಆಗುವುದೇ ಇಲ್ಲ.

ಅದಕ್ಕೆ ಇತರರನ್ನು ಹೊಣೆ ಮಾಡಿ ಆತ್ಮತೃಪ್ತಿ ಪಡೆಯುತ್ತಾನೆ. ಕನ್ನಡ ವಾಹಿನಿಯ ಸೀರಿಯಲ್ ಒಂದರಲ್ಲಿ ಅಪ್ಪನ ಅಪೇಕ್ಷೆಯಂತೆ ಮಗ ಲಾಯರ್‌ಗಿರಿ ಪಡೆಯುತ್ತಾನೆ. ಆದರೆ ಅವನ ಜೀವನದಲ್ಲಿ ಒಮ್ಮೆಯೂ ಒಂದೂ ಕೇಸಿನಲ್ಲಿ ಗೆಲ್ಲುವುದಿಲ್ಲ. ಆ ಮೂಲಕ ಅವನಿಗರಿವಿಲ್ಲದಂತೆ 'ನೀನು ಯಾವ ಕೇಸಿನಲ್ಲೂ ಗೆಲ್ಲುವುದಿಲ್ಲ' ಅನ್ನುವ ತಂದೆಯ ಮಾತನ್ನು ನಡೆಸಿಕೊಡುತ್ತಿರುತ್ತಾನೆ. ತಂದೆಯ ಮೇಲೆ ಸುಪ್ತವಾಗಿ ಪರೋಕ್ಷವಾಗಿ ಸೇಡು ತೀರಿಸಿಕೊಳ್ಳುತ್ತಿರುತ್ತಾನೆ. ಇಲ್ಲಿ ನಾಯಕ ತಂದೆಯನ್ನು ಪ್ರೀತಿಸಬೇಕೆಂದು ಹೊರಡುತ್ತಾನೆ; ಮತ್ತೆ ಅದೇ ಬಲೆಯಲ್ಲಿ ಬೀಳುತ್ತಾನೆ. ತನ್ನ ತಪ್ಪಿಗೆ ತಾನೇ ಹೊಣೆಗಾರನಾಗುವ ಜವಾಬ್ದಾರಿಯಿಂದ ನುಣುಚಿಕೊಳ್ಳುತ್ತಿರುತ್ತಾನೆ. ಆ ಮೂಲಕ ತನ್ನ ಹೆತ್ತವರ

ಮೇಲೆ ಸಮಾಜದ ಮೇಲೆ ತಪ್ಪನ್ನು ಹೊರಿಸಿ ಸಂತೋಷ ಪಡುತ್ತಾನೆ.

ಇಲ್ಲಿ ನಾಯಕ ಎರಡು ಮನಸ್ಥಿತಿಯಿಂದ ನರಳುತ್ತಾನೆ.

೧. ನಾನು ಸರಿಯಿಲ್ಲ ನೀನು ಸರಿಯಾಗಿದ್ದೀಯ. (I am Ok, you are Ok)

೨. ನಾನು ಸರಿಯಾಗಿ ಇದ್ದೇನೇ, ನೀನು ಸರಿಯಾಗಿಲ್ಲ (I am Ok, you are not Ok)

೩. ನಾನು ಸರಿಯಾಗಿಲ್ಲ ನೀನೂ ಸರಿಯಾಗಿಲ್ಲ (I am not Ok, you are not Ok)

ಮೊದಲನೆಯ ಮನಸ್ಥಿತಿಯಿಂದ ಆತ್ಮಾವಲೋಕನಕ್ಕೆ ಒಳಗಾಗಿ ಬದಲಾಗಬೇಕೆಂದು ತುಡಿಯುತ್ತಾನೆ. ಎರಡನೆಯದರಿಂದ, ತನ್ನ ಸ್ವಯಂಕೃತಾಪರಾಧದಿಂದ ಹೆತ್ತವರನ್ನು, ಸಮಾಜವನ್ನೂ ಒಳಗು ಮಾಡಿ ತಾನೂ ನರಳುತ್ತಾನೆ. ಕೊನೆಗೆ, ಭಿನ್ನ ಆಯಾಮದಲ್ಲಿ ಬದುಕಲು ಒಳ್ಳೆಯ ಮಾತು, ವರ್ತನೆಗಳಿಂದ ಮುಖವಾಡ ಧರಿಸಿ ಗಮನ ಸೆಳೆಯಲು ಯತ್ನಿಸಿ, ಅದರಲ್ಲಿ ಯಶಸ್ವಿಯೂ ಆಗುತ್ತಾನೆ. ಆದರೆ ಅದರಲ್ಲೂ ಸೋಲನ್ನುಂಡು ಮನಶ್ಶಾಂತಿ ಕೆಡುತ್ತದೆ. ಪರಿಣಾಮ : ಅಪರಾಧಿ ಮನೋವೃತ್ತಿ: ಆತ್ಮನಿಂದೆಯಲ್ಲಿ ಕಾಲ ಕಳೆಯುತ್ತಾನೆ.

ಇದಕ್ಕೆ ಹಿನ್ನೆಲೆ: ಅವನ ಸೋಲಿಗೆ ಅವನು ಪೂರ್ಣ ಹೊಣೆಗಾರನು ಅಲ್ಲ. ಅದರ ಬೇರು ಅವನ ಬಾಲ್ಯದಲ್ಲಿದೆ. ಆದರೆ ಅದರಿಂದ ಹೊರ ಬರುವುದೂ ಅವನ ಹೊಣೆಯಾಗಿರುತ್ತದೆ. ಸೈಕೋಥೆರಪಿಯಲ್ಲಿ 'ಹಣೆಬರಹ" (Script) ಎಂಬ ಮಾತಿದೆ. ಹಾಗೆ ಮಾಡು, ಹೀಗೆ ಮಾಡಬಾರದು ಎಂದು ಹೆತ್ತವರ ಹೇರಿಕೆಯ ನೆರಳಿನಲ್ಲಿ ಬೆಳೆದ ಮಗು ಆ ವರ್ತನೆಯನ್ನು ಜೀವಮಾನವಿಡೀ ನಿರ್ವಹಿಸುತ್ತಾನೆ. 'ತಾನು ಹೇಗೆ ಬಾಳಬೇಕು ಎಂಬುದನ್ನು ಮನುಷ್ಯ ತನ್ನ ಬಾಲ್ಯದ ನಿರ್ಧಾರಗಳಂತೆ ಜೀವಮಾನವಿಡೀ ಬಾಳುತ್ತಾನೆ.' ಅದನ್ನು ಅವನು ಭವಿಷ್ಯದಲ್ಲಿ ಸಕಾರಾತ್ಮಕವಾಗಿ ತೆಗೆದುಕೊಳ್ಳುತ್ತಾನೋ, ನಕಾರಾತ್ಮಕವಾಗಿ ತೆಗೆದುಕೊಳ್ಳುತ್ತಾನೋ ಎನ್ನುವುದರಲ್ಲಿ ಅವನ ಭವಿಷ್ಯ ನಿರ್ಧಾರವಾಗುತ್ತದೆ. ಇಲ್ಲಿನ ನಾಯಕನ ವಿಷಯದಲ್ಲೂ ಅದೇ ಆಗಿದೆ. ಅವನು ಅದನ್ನು ಸಕಾರಾತ್ಮಕವಾಗಿ ಗ್ರಹಿಸದೆ ತನ್ನ ಇಂದಿನ ಸ್ಥಿತಿಯಲ್ಲಿ ಹೇಗಿರಬೇಕೆಂದು ಯೋಚಿಸದೆ ಗತದಲ್ಲೇ ಬದುಕುವುದರಿಂದ ಅವನ ಸಮಸ್ಯೆ ಪ್ರಾರಂಭವಾಗುತ್ತದೆ.

ಕತೆಯಲ್ಲಿ ಅವನೆಲ್ಲ ವರ್ತನೆಗಳಿಗೂ ಮನಶಾಸ್ತ್ರದ ಹಿನ್ನೆಲೆಯಿದೆ: ಶಾಲೆಯಲ್ಲಿ ಅವನದಲ್ಲದ ತಪ್ಪಿಗೆ ಶಿಕ್ಷಕರು ಶಿಕ್ಷಿಸುತ್ತಾರೆ. ಆಂಗ್ಲ ಪದವೊಂದರ ಪ್ರಯೋಗಕ್ಕೆ ಹೋಗಿ ಅದರಿಂದ ಆಭಾಸವಾಗಿ ಶಿಕ್ಷಕರಿಂದ ಬೈಗುಳ ಪಡೆಯುತ್ತಾನೆ. ಅದೇ ಶಿಕ್ಷಕ ಬೇರೊಬ್ಬ ವಿದ್ಯಾರ್ಥಿಯನ್ನು ಹೊಡೆದಾಗ ಅವನು ಅವರ ಅಪ್ಪನನ್ನು ಕರೆದುಕೊಂಡು ಬಂದು ಶಿಕ್ಷಕರನ್ನು ತರಾಟೆಗೆ ತೆಗೆದುಕೊಳ್ಳುತ್ತಾನೆ. ಜಿಪ್ಪನಿಗೇ ದೊಣ್ಣೆಯ ಪೆಟ್ಟು! ಶಿಕ್ಷಕರಲ್ಲಿ ತಪ್ಪಿಲ್ಲ, ತನ್ನದೇ ತಪ್ಪಿದೆ, (I am not Ok, you are Ok) ಎಂದು ತನ್ನ ಮೇಲೆ ತಪ್ಪನ್ನು ಹೇರಿಕೊಂಡ. ಬಾಲ್ಯದ ಬೇರು ಅವನನ್ನು ಜಗ್ಗಿ ಹಿಡಿಯಿತು.

ಹಗ್ಗ -೧ ''ಇದು ನನ್ನದಲ್ಲ ಎಂಬ ಭಾವನೆ ಬಂತು. ಇದನ್ನು ಹೊರಗೆ ಒಗೆದು ಬಿಡಬೇಕು ಒಗೆಯಲು ಸಾಧ್ಯವಾಗಲಿಲ್ಲ.'' ಹಣೆಬರಹ!

ಅವನ ಅಪ್ಪನ ಅಪೇಕ್ಷೆಯಂತೆ ಬದುಕಿದ. ಬೆವರಿದ, ನರಳಿದ. ಅವನ ನರಳುವಿಕೆಯ ಹಿಂದೆಲ್ಲಾ ಅವನ ಅಪ್ಪನ ನೆರಳು ತಾಗಿಕೊಂಡೇ ಇತ್ತು. ಬಾಲ್ಯದ ಹಗ್ಗ ಜಗ್ಗಿ, ಜಗ್ಗಿ ಭುಜ ಭಾರವಾಯಿತೇ ಹೊರತು ಭಾರ ಇಳಿಯಲಿಲ್ಲ.

ಹಗ್ಗ – ೨: ವೃತ್ತಪತ್ರಿಕೆಗಳನ್ನು ಓದಿ ವೇಳೆ ಹಾಳು ಮಾಡಿಕೊಳ್ಳಬೇಡ – ತಂದೆಯದು.

ಹಗ್ಗ – ೩ : ಇಲ್ಲಿ ನೋಡು ಈಗೇನಾಗಿದೆ ಕಾಲ ತುಂಬಾ ಕಷ್ಟದ್ದಾಗುತ್ತಿದೆ. ನಮ್ಮ ಕಾಲ

ಹೇಗೂ ಸರಿಯಿತು. ನೀವು ಏನೇನು ಅನುಭವಿಸಬೇಕಾಗುತ್ತದೆಯೋ ಯಾರು ಬಲ್ಲರು!

...ಉಪದೇಶಗಳ ಕಂತೆಯೇ ಹರಿದುಬರುತ್ತಿತ್ತು. ಪರಿಣಾಮ: ಭಯ, ಕಣ್ಣೆದುರು ಭಯಂಕರವಾದ ಶೂನ್ಯ ಬಂದು ಭಯಗ್ರಸ್ತನಾಗುತ್ತಿದ್ದ. ಬೇರೆಯವರಿಗೂ ಹೀಗಾಗುತ್ತದೆಯೇ ಎಂದು ಯೋಚಿಸಲೂ ಭಯ! ಈ ಭಯವೇ ಅವನ ಸಾಧನೆಯ ಪ್ರಯತ್ನದಲ್ಲಿ ದೊಡ್ಡ ತೊಡರುಗಾಲು. 'ನಾನು ನಿನ್ನ ಹಿತವನ್ನೇ ಬಯಸುತ್ತೇನೆ' ಎನ್ನುವ ಅಪ್ಪನ ಮಾತು ತಪ್ಪಿ ನಡೆದರೆ ತನ್ನ ಅಂತ್ಯ ಎಲ್ಲಾಗುತ್ತದೆಯೋ ಎನ್ನುವ ಭಯ. ಆ ಭಯಕ್ಕೆ ಬದ್ಧನಾಗಿ ಇಡೀ ಜೀವನ ನಡೆಸುವ ನಿರ್ಧಾರ ದುರಂತಕ್ಕೆ ತಳ್ಳುತ್ತದೆ.

ಕತೆಯ ಪ್ರಾರಂಭದಿಂದಲೇ ಅವನ ಆತ್ಮಾವಲೋಕನದ ಹಾದಿ ವ್ಯಕ್ತವಾಗುತ್ತದೆ. ಕಾಲೇಜಿಗೆ ಸೇರಿದಾಗ ಪ್ರಾಚಾರ್ಯರು ಹೇಳಿದ "ಒಂದು ಕುರಿಯನ್ನು ಹಿಂಬಾಲಿಸಿ ಸಾವಿರ ಕುರಿಗಳು ಹಳ್ಳದಲ್ಲಿ ಬೀಳುವಂತೆ ನೀವು ಇಲ್ಲಿ ಬಂದಿಲ್ಲ" ಎಂಬ ಮಾತು ಅವನಲ್ಲಿ ಹೊಸ ಅಪೇಕ್ಷೆಯನ್ನು ಮೊಳೆಯಿಸಿತು. ಭವ್ಯ ಕಾಲೇಜು, ಅದರ ಭವ್ಯ ಗ್ರಂಥಾಲಯ ಆಸೆ ಹುಟ್ಟಿಸಿತು. ಪ್ರಥಮ ಬಾರಿಗೆ ಹೊಸಗಾಳಿಯಲ್ಲಿ ಉಸಿರಾಡಿದ. "ನಾಲ್ಕು ಗೋಡೆಗಳಿದ್ದ ಮಾತ್ರಕ್ಕೆ ಮನೆಯಾದೀತೆ? ತಂದೆಯಿದ್ದಾನೆ, ತಾಯಿ ಇದ್ದಾಳೆ ಹೆಚ್ಚಲ್ಲ. ಇಂದಲ್ಲದಿದ್ದರೂ ನಾಳೆ ಏನು ಎಂಬ ಚಿಂತೆ ಎಂಬುದಿಲ್ಲ. ಈ ಮನೆಯಲ್ಲಿ ಗೃಹತತ್ವದ ಮುಖ್ಯ ಪ್ರಾಣವೇ ಇಲ್ಲ ಎಂದೆನಿಸುತ್ತಿತ್ತು. ಒಂದು ಬಗೆಯ ಕಳಾಹೀನತೆ ಮನೆಯನ್ನು ಆವರಿಸಿದಂತೆ ಭಾಸವಾಗುತ್ತಿತ್ತು." ಮನೆಯೊಳಗೆ ಬರುವ ಗಾಳಿಗೂ ಬೆಳಕಿಗೂ ಕೂಡ ಒಂದು ಬಗೆಯ ಮೊದ್ದುತನ ಅಂಟಿಕೊಂಡಂತೆ ಕಾಣುತ್ತಿತ್ತು. "ಏನನ್ನಾದರೂ ಮಾಡಬೇಕು. ಮನೆಗೆ ಅಂಟಿದ ಪಾಪವನ್ನು ಏನಾದರೂ ಮಾಡಿ ತೆಗೆಯಬೇಕು" ಎಂದುಕೊಂಡ. ಮೊದಲ ಬಾರಿಗೆ ತಾನು ತನ್ನ ತಂದೆಯಂತಾಗಬಾರದು ಎಂಬ ನಿರ್ಧಾರ ಅವನಲ್ಲಿ ಮೂಡಿತು. ಹೊಸ ಸ್ನೇಹಿತ ಸಿಕ್ಕ. ಇಂದಿನಿಂದ ಸ್ನೇಹಿತನ ಹೆಜ್ಜೆಯಲ್ಲಿ ಹೆಜ್ಜೆ ಹಾಕುವುದು ಎಂದುಕೊಂಡ. ಇಲ್ಲೂ ಅವನ ಗೆಳೆಯನನ್ನೇ ಅವಲಂಬಿಸಿದ್ದಾನೆ. ಅವನಂತೆ ನಾನೇಕಿಲ್ಲ ಎಂಬ ಪ್ರಶ್ನೆ ಸದಾ. ಅವನೇ ಇವನಿಗೆ ಮಾದರಿ. ಆದರೆ ಗೆಳೆಯನಿಗೆ ಅವನು ತುಂಬ ಹೆದರುತ್ತಿದ್ದ. ಇಲ್ಲೂ ಭಯ! ಇಲ್ಲಿ ಅವನ ತಾಯಿಯ ಬರಹ ಕೂಡ (Script) ಕೂಡ ಅವನ ತಂದೆಯಿಂದ ನಿರ್ಧಾರಿತವಾಗಿದೆ. ಏಕೆಂದರೆ ಅವಳು ಗಂಡನ ನೆರಳು. ಆದರೆ ಅವನನ್ನು ಕಾಲೇಜಿಗೆ ಸೇರಿಸುವ ವಿಷಯದಲ್ಲಿ 'ನಾನು ಮಗನ ಬಗಲಲ್ಲಿ ನಿಲ್ಲುತ್ತೇನೆ. ರಟ್ಟೆಯಲ್ಲಿ ಬಲವಿರುವವರೆಗೆ ದುಡಿದು ಅವನನ್ನು ಕಲಿಸುತ್ತೇವೆ' ಎನ್ನುವ ನಿರ್ಧಾರವನ್ನು ಅವನ ತಂದೆ ಈ ಹಿಂದೆ ಎದುರಿಸಿರಲಿಲ್ಲ. ತನ್ನ ಹೆಂಡತಿಯ ಸ್ಥಿರತೆಯಿಂದ ತಂದೆ ಮೂಕವಿಸ್ಮಿತನಾದ.

"ಗೆಳೆಯನ ಪ್ರೇರಣೆಯಿಂದ ಅವನು ತನ್ನ ಹೃದಯದಲ್ಲಿ ಅಗ್ನಿಕುಂಡವನ್ನು ಹೊತ್ತಿಸಿಕೊಂಡಿದ್ದ. ಆದರೆ ಆ ಗೆಳೆಯ ಕಾಲೇಜು ಬಿಟ್ಟು ಹೋದಾಗ ಅವನೆದುರು ಎರಡು ದಾರಿಗಳಿದ್ದವು. ಗೆಳೆಯನಿಗೆ ತಾನೇ ಕೊಟ್ಟಿದ್ದ ಅಧಿಕಾರವನ್ನು ತಾನು ಇನ್ನೊಬ್ಬರ ಮೇಲೆ ನಡೆಸುವುದು. ಇಲ್ಲವೇ ಬರಿದಾದ ತನ್ನ ಹೃದಯದ ಸಿಂಹಾಸನದ ಮೇಲೆ ಇನ್ನೊಬ್ಬರನ್ನು ತಂದು ಕೂರಿಸುವುದು. ಗೆಳೆಯ ದೂರ ಹೋದ ಮೇಲೆ ಅವನು ತನ್ನ ಮೇಲೆ ಹೊರಿಸಿದ್ದ ಭಾರವನ್ನು ಕೆಳಗಿಳಿಸಿಬಿಟ್ಟ.' ಇಲ್ಲಿ ಗೆಳೆಯನ ಮಾದರಿಯೂ ದೂರವಾಯಿತು.

ಲೋಕವೇ ತನ್ನ ವಿರುದ್ಧ ಒಳಸಂಚು ಹೂಡಿದೆ ಎನ್ನಿಸಿತು. (ನಾನು ಸರಿಯಾಗಿದ್ದೇನೆ, ನೀನು ಸರಿಯಾಗಿಲ್ಲ!) ತಾಯಿ ತನ್ನ ಗೆಳತಿಯ ಮನೆಯಲ್ಲಿ ಔಟ್‌ಹೌಸಿನಲ್ಲೊಂದು ಜಾಗ ಕೊಡಿಸುತ್ತಾಳೆ.

ಅವನಿಗೆ ಗುರುತಿಸಿಕೊಳ್ಳಬೇಕೆಂಬ ಹಂಬಲವೂ ಶುರುವಾಗುತ್ತದೆ. ಇಲ್ಲೂ ಅವನು ಗೆಲ್ಲುವ ಮಾರ್ಗವಿತ್ತು. ಮತ್ತೆ ಸ್ವಯಂ ಮರುಕ. 'ಬೆಳಗಾದರೆ ಏಕೆ ಬೆಳಗಾಯಿತು' ಎಂದು ನಿರುತ್ಸಾಹ. ರಾತ್ರಿ ಬಂದರೆ ಏಕೆ ಬಂತು ಎಂಬ ನಿರುತ್ಸಾಹ.' ತಾಯಿಯ ಗೆಳತಿಯ ಮನೆಯವರು ತನ್ನನ್ನು ಗಮನಿಸಲಿಲ್ಲ ಎನ್ನುವ ಕೊರಗು. ಅವರ ಆತಿಥ್ಯ ಪಡೆಯುವ ನಿರೀಕ್ಷೆ. ಅನುಕೂಲತೆಗಳು ಒದಗಿದಂತೆ ನಿರೀಕ್ಷೆಗಳು ಗರಿ ಕೆದರುತ್ತವೆ! ಬದಲಾಗಬೇಕು ಎನ್ನುವ ಹಂಬಲದ ಬೆನ್ನ ಹಿಂದೆಯೇ ಧೂಮಪಾನ ಏಕೆ ಮಾಡಬಾರದು ಎನ್ನುವ ಅವನ ಮನೋಭಾವ ಇದೆ. ಬದಲಾಗಬೇಕು ಎನ್ನುವ ನಿರ್ಧಾರ ಸಕಾರಾತ್ಮಕವಾಗಿರಬೇಕು. ಆದರೆ ಅದು ಇಲ್ಲಿ ನಕಾರಾತ್ಮಕವಾಗಿದೆ. ಹೇಗೆ ಬದಲಾಗಬೇಕೆಂಬ ಸ್ಪಷ್ಟ ಅರಿವು ಅವನಿಗೆ ಇಲ್ಲ. ಗೆಳೆಯ ಹೇಳುವ ಹಾಗೆ. ''ಇದು ತಪ್ಪನ್ನು ಸಮರ್ಥಿಸಿಕೊಳ್ಳುವ ರೀತಿ. ''ನೀವು ಏನು ಹೇಳುತ್ತೀರಿ? ನಿಮ್ಮ ಚಾರಿತ್ರ್ಯ ಸುತ್ತಲಿನ ವಾತಾವರಣದ ಪ್ರತಿಕ್ರಿಯೆ ಎಂದು ಒಪ್ಪಿಕೊಳ್ಳೋಣ. ಒಪ್ಪಿಕೊಂಡಿದ್ದರಿಂದ ಏನು ಬಂತು? ನಿಮ್ಮ ಚಾರಿತ್ರ್ಯ ಬದಲಾಯಿತೇ? ನಿಮ್ಮ ಸಮಸ್ಯೆಗೆ ಪರಿಹಾರ ದೊರೆಯಿತೆ? ಬಹಳವಾದರೆ ಹೊಣೆ ನನ್ನದಲ್ಲ ಎಂಬುವುದರಿಂದ ಒಂದಿಷ್ಟು ಮನಸ್ಸಿಗೆ ಸಮಾಧಾನವಾಗಬಹುದು. ಆದರೆ ಸಮಾಧಾನದಿಂದ ಏನು ಲಾಭ?'' ''ನಿಮಗೆ ತುಂಬಾ ಬುದ್ಧಿಯಿದೆ, ಆದರೆ ಸದುಪಯೋಗ ಮಾಡಿಕೊಂಡರೆ ನಿಮ್ಮ ಸ್ಥಿತಿ ಉತ್ತಮವಾಗುತ್ತದೆ. ನೀವು ಇನ್ನೊಬ್ಬರಿಂದ ಅನುಕಂಪವನ್ನು ಬಯಸುತ್ತೀರಿ'' ಎನ್ನುತ್ತಾನೆ. ಕಾದಂಬರಿಯ ನಾಯಕನ ಸಮಸ್ಯೆ ಇರುವುದೇ ಇಲ್ಲೇ. ''ನಾವು ಜಗತ್ತನ್ನು ಅನುಭವಿಸುತ್ತಿರುವ ರೀತಿಯನ್ನು ಮಾತ್ರ ಬದಲಾಯಿಸಿಕೊಳ್ಳಬಲ್ಲೆವು. ಜಗತ್ತನ್ನು ಬದಲಾಯಿಸಲಾರೆವು'' ಎಂಬ ಸಕಾರಾತ್ಮಕ ದೃಷ್ಟಿಕೋನದ ಕೊರತೆಯೇ ನಾಯಕನಿಗಾದ ದೊಡ್ಡ ನಷ್ಟ. ರಣರಂಗಕ್ಕೆ ಹಿದನಾದರೂ ಚಕ್ರವ್ಯೂಹದಿಂದ ಹೊರಬರಲಾಗದ ನಕಾರಾತ್ಮಕ ಜಾಣತನ ಅವನನ್ನು ಮುಖವಾಡಕ್ಕೆ ಹೊಂದಿಕೊಳ್ಳುವಂತೆ ಮಾಡಿತು. ಆ ಮುಖವಾಡವೂ ಅವನದಲ್ಲವಲ್ಲ? ಅದು ಅವನ ಪಾಪಪ್ರಜ್ಞೆಗೆ ಕಾರಣವಾಯಿತು. ಪರಿಹಾರದ ದಾರಿ ಹುಡುಕದೆ, ಕಷ್ಟದ ಮೂಲವನ್ನು ಇನ್ನೆಲ್ಲೋ ಅರಸುತ್ತಾ ಕುಳಿತದ್ದೇ ನಾಯಕನ ಸೋಲಿಗೆ ಕಾರಣವಾಯಿತು. ಎಲ್ಲಾ ಮಾನಸಿಕ ಸೋಲುಗಳ ಹಿನ್ನೆಲೆಯೂ ಇದೇ ಆಗಿರಬಹುದು.

ಇಡೀ ಕಾದಂಬರಿಯನ್ನು ಓದಿ ಮುಗಿಸಿದಾಗ ನಾಯಕನಿಗೆ ಮಾನಸಿಕ ಗೊಂದಲಗಳಿಂದ ಹೊರ ಬರುವ ಬೇರೆ ದಾರಿಯೇ ಇರಲಿಲ್ಲವೇ? ಎಂಬ ಪ್ರಶ್ನೆಯೂ ಬರುತ್ತದೆ. ಅದು ಓದುಗನ ನಿರೀಕ್ಷೆಯೂ ಆಗಿರಬಹುದು. ನಾಯಕ ತನ್ನ ಗೊಂದಲಗಳಿಂದ, ಅನುಭವಿಸುವ ಮಾನಸಿಕ ಹಿಂಸೆಗಳಿಂದ ಆದಷ್ಟು ಬೇಗ ಪರಿಹಾರ ಕಾಣುವ ತುಡಿತ ಅವನ ಬದುಕಿನುದ್ದಕ್ಕೂ ವ್ಯಕ್ತವಾಗುತ್ತದೆ. ಈ ಎಲ್ಲ ವಿವರಗಳನ್ನು ನೋಡುವಾಗ, ಅವನ ಬದಲಾವಣೆ ಬಯಸುವವರಿಗೆ, ಸಹಜವಾಗಿ ನಾಯಕ ಮುಂದಿನ ದಾರಿಯ ಬಗ್ಗೆ ಸಹಜ ಕುತೂಹಲ ಕಾಣುತ್ತದೆ. ಅವನ ಹಣೆಬರಹ ಬದಲಾಯಿತೇ ಎಂಬ ಕುತೂಹಲದಿಂದ ಓದತೊಡಗಬಹುದು. ಆದರೆ ಕಾದಂಬರಿ ಮುಕ್ತಾಯ ವಾಗುವುದು ಕಣ್ಣೀರಧಾರೆಯಿಂದ. ಕೈಯಿಂದ ತುಪ್ಪ ಜಾರಿ ಬಾಣಲೆಯಲ್ಲಿ ಬಿದ್ದ ಅನುಭವ!. ಆ ರೀತಿಯ ತಾದ್ಯಾತ್ಮ ಓದುಗನಿಗಾಗುತ್ತದೆ.

ಬೇರೊಂದು ಮಾನಸಿಕ ಪಾತಳಿಯಲ್ಲಿ, ಮನಶಾಸ್ತ್ರೀಯ ಹಿನ್ನೆಲೆಯಲ್ಲಿ ಯೋಚಿಸಿದಾಗ ನಾಯಕನ ಮನಸ್ಸು ಹೇಗೆ ಪ್ರಫುಲ್ಲವಾಗಬಹುದಿತ್ತು ಎಂದು ಸಂಕ್ಷಿಪ್ತವಾಗಿ ಊಹಿಸೋಣ: ಅವನಿಗೆ ತಂದೆಯ ಮಾದರಿ ಬೇಡವಾಗಿತ್ತು. ಗೆಳೆಯನ ಮಾದರಿಯೂ ಅರ್ಧದಲ್ಲೇ ತುಂಡಾಯಿತು. ಇವೆಲ್ಲ

ಬೇರೆಯದೇ ಮಾದರಿಗಳಾದವು. ಅವನಿಗೆ ಅವನದೇ ಆದ ಮಾದರಿ ಬೇಡವೇ? ಅದೇ ದಾರಿಯಲ್ಲಿ ನಡೆದ. ಬಾಲ್ಯದ ಹಗ್ಗ ತುಂಡಾಯಿತು. ಮುಖವಾಡ ಬದಲಾಯಿತು. 'ಹಣೆ' ಬರಹ ಬದಲಾಯಿತು. ತಾನು ಒಳ್ಳೆಯ ಮಾದರಿಯಾಗಬಲ್ಲೆ ಎಂಬುದನ್ನು ಅರಿತುಕೊಂಡ. 'ನಾನು ಸರಿಯಿದ್ದೇನೆ, ನೀನೂ ಸರಿಯಿದ್ದೀಯ' ಎಂಬ ಭಾವ ಮಿಂಚಿತು. ಎಲ್ಲಾ ಮಾನಸಿಕ ಗೆಲುವಿನ ಹಿನ್ನೆಲೆಯೂ ಇದೇ ಆಗಿದೆ. ಇದನ್ನು ಕಾದಂಬರಿ ಅವ್ಯಕ್ತವಾಗಿ ಹೇಳುತ್ತದೆ! ಇದು ನಾಯಕನ 'ನಾಲ್ಕನೆಯ ಆಯಾಮ'ವೂ ಅಹುದು.

ಭಾವಗಳ ಸೂಕ್ಷ್ಮ ಕೆರಳಿಕೆಗಳನ್ನು ಸತ್ಯದ ಒರೆಗಲ್ಲಿಗೆ ಹಚ್ಚಿ ನೋಡುವ ಕಾಣ್ಕೆ ಕಾದಂಬರಿಕಾರರಿಗೆ ಪ್ರಿಯವಾದುದೂ ಆಗಿದೆ. ಈಚೆಗೆ ಹೆಚ್ಚು ಪ್ರಚಾರಕ್ಕೆ ಬರುತ್ತಿರುವ ವರ್ತನಾ ಮನೋವಿಜ್ಞಾನದ ಪ್ರಮುಖ ಶಾಖೆಗಳಾದ ಟಿ.ಎ. (Transactional Analysis) ಗೆಸ್ಟಾಲ್ಟ್ ಥೆರಪಿ (Gestalt Therapy)ಆಗಿನ ಕಾಲದಲ್ಲೇ ಈ ಕಾದಂಬರಿಯಲ್ಲಿ ಅಳವಡಿಕೆಯಾಗಿರುವುದು ಮಹತ್ವದ ಅಂಶ.

ಕುಸುಮಾಕರ ದೇವರಗೆಣ್ಣೂರು ಅವರ 'ನಾಲ್ಕನೆಯ ಆಯಾಮ' ಕನ್ನಡ ಪುಸ್ತಕ ಪ್ರಾಧಿಕಾರದಿಂದ ಜನಪ್ರಿಯ ಪುಸ್ತಕ ಮಾಲಿಕೆಯಡಿ ಮರು ಮುದ್ರಣಗೊಂಡು ಮಾನ್ಯತೆ ಪಡೆದಿದೆ. ಆ ಮೂಲಕ ಒಂದು ಉತ್ತಮ ಕೃತಿ ಮತ್ತೊಮ್ಮೆ ಓದುಗರಿಗೆ ಲಭ್ಯವಾಗಿದೆ.

ಕುಸುಮಾಕರರು ಸರ್ವ ಕಾಲಕ್ಕೂ ನಿಲ್ಲುವ ಲೇಖಕ. ನವ್ಯದ ಮುಖ್ಯ ಲೇಖಕರಾಗಿಯೂ ಕುಸುಮಾಕರರು ತಡವಾಗಿ ಗುರುತಿಸಲ್ಪಟ್ಟಿದ್ದು ಆಕಸ್ಮಿಕವೋ, ಅನಿವಾರ್ಯವೋ. ತಡವಾಗಿ ಯಾದರೂ ಅವರ ಪ್ರತಿಭೆಗೆ ಮಾನ್ಯತೆ ದೊರಕುತ್ತಿರುವುದು ಅಪ್ಯಾಯಮಾನ ಸಂಗತಿ.

ಸುವರ್ಣಶ್ರೀ, ನಂ. ೮೯, ೧೨ನೇ ಮೇನ್,
ಪುಷ್ಪಾಂಜಲಿ ಟಾಕೀಸಿನ ಹಿಂಭಾಗ, ಶಿವನಗರ,
ರಾಜಾಜಿನಗರ, ಬೆಂಗಳೂರು - ೫೬೦ ೦೧೦



# ಅಗುಳಿ ತೆಗೆದ ಅನನ್ಯತೆಯ ಶೋಧ: 'ಪರಿಘ'

✦ ಡಾ. ಕವಿತಾ ರೈ ಬಿ.ಆರ್.

**ಕ**ಳೆದ ಶತಮಾನದಲ್ಲಿ ಕನ್ನಡದ ಸಾಹಿತ್ಯ ಸಂದರ್ಭ ಮಾತ್ರವಲ್ಲ, ಇಡೀ ಇಂಡಿಯಾ ಹಲವು ರೀತಿಯ ಛಿದ್ರೀಕರಣಗಳನ್ನು ಕಾಣುತ್ತ ಬಂದಿದೆ. ದೇಶ, ಸಮಾಜ, ಜಾತಿ, ಭಾಷೆ ಮತ್ತು ವ್ಯಕ್ತಿಯ ಅಂತರಂಗ - ಇವುಗಳಲ್ಲಿ ಸಂಭವಿಸಿರುವ ವಿಘಟನೆಯ ಪ್ರಕ್ರಿಯೆಗಳು ಸಾಹಿತ್ಯ ಕಲೆಗಳಿಗೆ ಒದಗಿ ಬರುತ್ತಿರುವ ವಸ್ತುಗಳಾಗಿವೆ. ವಿಘಟನೆ ಎನ್ನುವುದು ಆಧುನಿಕ ಜಗತ್ತಿನ ಲಕ್ಷಣ ಹೇಗೋ ಹಾಗೆಯೇ ಆಧುನಿಕ ಕಲೆ-ಸಾಹಿತ್ಯ, ಸಂಸ್ಕೃತಿಗಳ ಖಾಯಂ ಸ್ವರೂಪವೂ ಹೌದು. ೧೯೯೫ರಲ್ಲಿ ಬಂದ 'ಪರಿಘ' ಕಾದಂಬರಿ ಅನನ್ಯತೆಯ ನೆಲೆಯಿಂದ ವಿಘಟನೆಯ ವಾಸ್ತವ ಬಿಂಬಗಳನ್ನು ಆಮೂಲಾಗ್ರವಾಗಿ ಶೋಧಿಸುವ ಕೃತಿಯಾಗಿದೆ. ಇದು ವ್ಯಕ್ತಿಯ ವಿಘಟನೆಯನ್ನು ಆತನ ಗುರುತಿಸುವಿಕೆಗೆ ಸಂಬಂಧಿಸಿದಂತೆ ಪ್ರಾಯೋಗಿಕತೆ ಮತ್ತು ಕಾಲ್ಪನಿಕತೆಯ ಸಂಯೋಜನೆಯನ್ನು ಆಧರಿಸಿದ ಮನೋನಿರ್ಮಿತ ಸಂರಚನೆಯಾಗಿ ಕಾಣಿಸಿಕೊಳ್ಳುತ್ತದೆ. ಇದರಿಂದಾಗಿ ಕೃತಿಯ ಒಟ್ಟು ಲಕ್ಷ್ಯ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಪ್ರಶ್ನೆಗಳಿಗಿಂತ ಹೆಚ್ಚಾಗಿ ವ್ಯಕ್ತಿ ಕೇಂದ್ರಿತವಾಗಿದೆ. ವ್ಯಕ್ತಿಗಳ ಅನನ್ಯತೆ 'Identity'ಯನ್ನು ಹಲ ಆಯಾಮಗಳಿಂದ ಬಗೆಯುವ ಕಾರಣದಿಂದಾಗಿ, ಅಸ್ತಿತ್ವವಾದೀ

ಹುಡುಕಾಟ ಕೂಡ ಇದರ ಮುಖ್ಯ ಆಶಯವಾಗಿದೆ. ಹೀಗಾಗಿ ಕಾದಂಬರಿಯು ಆರಂಭದಲ್ಲಿ ಕಾಣಿಸಿಕೊಳ್ಳುವ ರಾಷ್ಟ್ರೀಯತೆಯ ನಿರ್ಮಾಣದ ಗುರುತಿಸುವಿಕೆಯು ಕ್ರಿಯಾತ್ಮಕವಾಗಿ ವಿಸ್ತರಿಸಿಕೊಳ್ಳುವ ಬದಲು ವೈಯಕ್ತಿಕ ಸ್ವರೂಪದಲ್ಲಿ ಮತ್ತು ಒಂದರ್ಥದಲ್ಲಿ ಸಾಂದರ್ಭಿಕವಾಗಿ ಕಾಣಿಸಿಕೊಳ್ಳುತ್ತದೆ. ಆದರೆ ಇದು ವ್ಯಕ್ತಿಯ 'ಗುರುತಿಸುವಿಕೆ'ಯನ್ನು ತಾತ್ವಿಕವಾಗಿ ಕಟ್ಟುವ ಸಂಕೀರ್ಣ ರೂಪಕವಾಗಿ ಮುಖ್ಯವಾಗುತ್ತದೆ.

'ಪರಿಘ'ದ ನಾಯಕ ಅರವಿಂದ ಕಾದಂಬರಿಯ ಉದ್ದಕ್ಕೂ ಊರ್ಧ್ವಮುಖಿ ವ್ಯಕ್ತಿತ್ವವಾಗಿ ಬೆಳವಣಿಗೆ ಸಾಧಿಸಿದ ಪಾತ್ರ. ಈ ಪಾತ್ರಕ್ಕೆ ಮುಖಾಮುಖಿಗೊಳ್ಳುವ ಅಜೇಯ ಮತ್ತು ವಿನಯನ ಪಾತ್ರ ವ್ಯಕ್ತಿತ್ವದ ಅನ್ವೇಷಣೆಯಲ್ಲಿ ಅವಿರತವಾದ ಪ್ರಯತ್ನಕ್ಕೆ ಬೀಳುತ್ತವೆ. ಒಂದೇ ಶಾಲೆಯಲ್ಲಿ ಕಲಿಯುವ ಈ ಮೂರು ವ್ಯಕ್ತಿಗಳ ಮನೆಯ ಪರಿಸರ, ಕೌಟುಂಬಿಕ ಹಿನ್ನೆಲೆ ಸಹಜವಾಗಿ ಬೇರೆ ಬೇರೆ. ಸ್ವಾತಂತ್ರ್ಯದ ಹಂಬಲದಿಂದ ರಾಷ್ಟ್ರಸೇವೆಗಾಗಿ ಮನೆ ಬಿಟ್ಟ ತಂದೆ; ಮಗನ ಸಲುವಾಗಿ ದುಡಿಯುವ ತಾಯಿಯ ಮಗ ಅರವಿಂದ, ಆತನ ತಂದೆಯಂತೆ ಸ್ವಾಭಿಮಾನಿ ಹುಡುಗ. ಅಲ್ಲದೆ ಶಾಲೆಯ ಉಳಿದ ಹುಡುಗರಿಗಿಂತ ಹೆಚ್ಚು ಪ್ರಬುದ್ಧ. ವಿನಯ ಮತ್ತು ಅಜೇಯ ಅವನಿಗಿಂತ ಭಿನ್ನವಾದ ವಾತಾವರಣದಲ್ಲಿ ಬೆಳೆದವರು. ಹೆಚ್ಚು ಸುಭದ್ರವಾದ ಕೌಟುಂಬಿಕ ಹಿನ್ನೆಲೆ ಅವರಿಗಿದೆ. ಸದಾ ಅರವಿಂದನನ್ನು ಎದುರಿಗಿಟ್ಟುಕೊಂಡು ಹೋಲಿಸಿ ಬೆಳೆಯುವ ಅಜೇಯ ಸಾಹಿತ್ಯದಲ್ಲಿ ದೊಡ್ಡ ಹೆಸರು ಮಾಡಬೇಕೆಂದು ಹೊರಟವ. ಅದಕ್ಕಾಗಿ ಅವನು ಎಲ್ಲ ಬಗೆಯ ತ್ಯಾಗಕ್ಕೂ ಸಿದ್ಧನಾಗಿದ್ದ. ಆತ ಪ್ರಾಧ್ಯಾಪಕನಾಗಿ ಕವಿ, ಕಾದಂಬರಿಕಾರನಾಗಿ ಹೆಸರು ಮಾಡುವತ್ತ ದುಡಿಯುವುದು, ಅರವಿಂದ ಉಚ್ಚ ಶಿಕ್ಷಣಕ್ಕಾಗಿ ಮುಂಬೈಯಲ್ಲಿನ ಟಾಟಾ ಸಮಾಜ ಶಿಕ್ಷಣ ಸಂಸ್ಥೆಯನ್ನು ಸೇರಿ ವಿಜ್ಞಾನಿಯಾಗಿ, ಬರಹಗಾರನಾಗಿ ಅತಿ ಸಹಜವಾಗಿ ಹೆಸರು ಮಾಡುವುದು; ವಿನಯ ವೈದ್ಯನಾಗುವುದು ಹೀಗೆ ಕಾದಂಬರಿಯ ಪಾತ್ರಗಳು ಉದ್ದೇಶಿತ ಸಾಮಾಜಿಕ 'ಗುರುತಿಸುವಿಕೆ'ಗಾಗಿ ನಿರಂತರವಾಗಿ ಹೋರಾಡುತ್ತವೆ. ಕಾದಂಬರಿಯ ಪೂರ್ವಾರ್ಧದಲ್ಲಿ ಅರವಿಂದನ ವ್ಯಕ್ತಿತ್ವವನ್ನು, ಅವನ ಪ್ರತಿಭೆಯನ್ನು ನಿರೂಪಿಸುವ ಕೃತಿ ಉತ್ತರಾರ್ಧದಲ್ಲಿ ಸಂಪೂರ್ಣವಾಗಿ ಅಜೇಯನ ಪಾತ್ರವನ್ನು ಬೆಳೆಸುತ್ತದೆ. ಈ ಹುಡುಕಾಟದಲ್ಲಿ ಅಜೇಯನ ವ್ಯಕ್ತಿತ್ವದ ವಿಘಟನೆಯನ್ನು ಕಾದಂಬರಿಯ ಉದ್ದಕ್ಕೂ ನಿರೂಪಿಸುತ್ತ ಹೋಗುತ್ತದೆ. ''ಇಂದಿನವರೆಗೆ ಅವನು ತನ್ನ ಹೆಸರನ್ನು ಕುರಿತು ಯೋಚಿಸಿರಲಿಲ್ಲ. ಏಕೋ ಅವನಿಗೆ ಇಂದು ತನ್ನ ಹೆಸರಿನ ಬಗ್ಗೆ ಕುತೂಹಲ ಉಂಟಾಯಿತು. ಅವನ ಮನಸ್ಸಿನಲಿ ಬಹಳ ದಿನಗಳಿಂದ ತನಗೊಂದು ಕಾವ್ಯನಾಮ ಬೇಕು ಎಂಬ ಬಯಕೆಯೂ ಇತ್ತು. 'ಅಜಯ' ಶಬ್ದ ಒಂದು ಬಗೆಯ ತಿರಸ್ಕಾರವನ್ನು ಅವನಲ್ಲಿ ಹುಟ್ಟಿಸಿತು. 'ಅಭಯ' ಎಂಬ ಹೆಸರು ನನೆವಾಯಿತು. ಭಯ ಇಲ್ಲದವ ಎಂದು ಅರ್ಥ. ಅಕ್ಷಯನಾಶ ಇಲ್ಲದವ ಎಂದು ಅರ್ಥ. ಹಾಗಾದರೆ ಅಜಯ ಎಂದರೆ ಜಯ ಇಲ್ಲದವ ಎಂದು ಅರ್ಥ. ಶಬ್ದಕೋಶವನ್ನು ತೆಗೆದ. ಅದರಲ್ಲಿ ಸೋಲು ಅಪಜಯ ಎಂಬ ಅರ್ಥಗಳ ಜೊತೆಗೆ ಯಾರಿಂದಲೂ ಸೋಲಿಸಲಾಗದವ ಎಂಬ ಅರ್ಥವೂ ಇತ್ತು. ಏಕೋ ಅವನ ಮನಸ್ಸಿನಲ್ಲಿ ಯಾರಿಂದಲೂ ಸೋಲಿಸಲಾಗದವ ಎಂಬ ಅರ್ಥ ಆಳವಾಗಿ ನಿಲ್ಲಲಿಲ್ಲ. ಅಪಜಯ, ಸೋಲು ಎಂಬ ಅರ್ಥಗಳೇ ಆಳವಾಗಿ ಬೇರು ಬಿಡತೊಡಗಿದವು. ಹಾಗೇ ನೋಡುತ್ತ ಹೋದ. 'ಅಜೇಯ' ಶಬ್ದ ಕಣ್ಣಿಗೆ ಬಿತ್ತು.ಅವನಿಗೆ ಅದರ ಅರ್ಥ ಸ್ಪಷ್ಟವಾಯಿತು. ಹೌದು ಇಂದಿನಿಂದ ನಾನು ಅಜಯನಲ್ಲ, 'ಅಜೇಯ' ಇದೇ ನನ್ನ ಕಾವ್ಯನಾಮ. ನಾನು ಇಂದಿನಿಂದ ಅಜೇಯ.'' ಕಾದಂಬರಿಯ ಒಳಗಿನ ಅಜೇಯನ ಈ ಹುಡುಕಾಟವನ್ನು ಒಂದು ಚಾರಿತ್ರಿಕ

ಸಂದರ್ಭದ ಒಳಗಿಟ್ಟು ನೋಡಿದರೆ, ಅದು ಆ ಕಾಲದ ಸಾಹಿತ್ಯ ಸಂದರ್ಭದ ಹುಡುಕಾಟವಾಗಿ ಕೂಡ ಕಾಣಿಸಿಕೊಳ್ಳುತ್ತದೆ. ಅಜ್ಞೇಯನ ಮದುವೆಗೆ ಪೂರ್ವದಲ್ಲೇ ಮದುವೆಯಾಗುವ ಹೆಣ್ಣಿನ ಹೆಸರನ್ನು 'ಪ್ರತಿಮಾ' ಎಂದು ಇಡಲು ತೀರ್ಮಾನಿಸುವುದು ಮಾತ್ರವಲ್ಲ, ಸಮಾಜದಲ್ಲಿ ಅತಿ ಪ್ರಜ್ಞಾಪೂರ್ವಕವಾಗಿ ನಾಡು-ನುಡಿಯ ಸೇವೆಗಾಗಿ, ಉದ್ಧಾರಕ್ಕಾಗಿ ಕವಿಯಾಗಿ, ಧ್ಯೇಯ ಸಾಧನೆಗಾಗಿ ಹುಟ್ಟಿ ಬಂದವನಾಗಿ ಶ್ರೇಷ್ಠ ಮಹಾಕವಿ ಎನ್ನುವ ಅಹಂನಿಂದಲೇ ವ್ಯವಹರಿಸುವುದು ವ್ಯಕ್ತವಾಗುತ್ತದೆ. ಈ ಅಹಂ ಅನ್ನು ನಿರಸನಗೊಳಿಸುವುದು ಅರವಿಂದನಿಂದ ಆತನಿಗೆ ಬಂದ ಪತ್ರ.

"ಆ ದೀರ್ಘ ಕಾಗದದಲ್ಲಿ ಅವನ ಪ್ರಣಯ ಗೀತೆಗಳನ್ನು ಕುರಿತು ತನ್ನ ಅನಿಸಿಕೆಯನ್ನು ವ್ಯಕ್ತಪಡಿಸಿದ್ದ. ಅದರಲ್ಲಿ ಒತ್ತಿ ಒತ್ತಿ ಹೇಳಿದ್ದ :

'ಇದು ನನ್ನ ಅಭಿಪ್ರಾಯವಲ್ಲ, ಇದು ನಿನ್ನ ಪ್ರಣಯ ಗೀತೆಗಳನ್ನು ಆಸ್ವಾದಿಸಿ ಅವು ನನಗೆ ನೀಡಿದುದನ್ನು ಮಾತ್ರ ವ್ಯಕ್ತಪಡಿಸಿದ್ದೇನೆ. ನನ್ನ ಮಾತು ನಿನಗೆ ಅಹಿತವೆನ್ನಿಸಬಹುದು. ಉಪಾಯವಿಲ್ಲ. ನಿನ್ನನ್ನು ಕುರಿತು ಒಂದು ಅಭಿನಂದನಾ ಗ್ರಂಥ ಬರಲಿದೆ ಎಂದು ತಿಳಿದು ಸಂತೋಷವಾಯಿತು. ಸಂಪಾದಕರು, ನಾನು ನಿನ್ನ ಸ್ನೇಹಿತ ಎಂದು ನನ್ನಿಂದ ಒಂದು ಲೇಖನ ಕೇಳಿದ್ದಾರೆ. ವಿಷಯವನ್ನು ಅವರೇ ಹೇಳಿದ್ದಾರೆ. 'ವಿಶ್ವಕವಿ ಅಜ್ಞೇಯರ ಪ್ರಣಯ ಗೀತೆಗಳು' ನೀನು ನಾಡಿನ ಮಹಾಕವಿ ಯಾದರೂ ನನ್ನ ಸ್ನೇಹಿತ. ಸ್ನೇಹಕ್ಕಿಂತ ನನಗೆ ಸತ್ಯ ದೊಡ್ಡದು. ನಾನು ನನ್ನ ಲೇಖನವನ್ನು ಸಂಪಾದಕರಿಗೆ ಕಳುಹಿಸಿಲ್ಲ. ನೀನು ಓದಿ ನೋಡು. ಇದು ಪ್ರಕಟವಾಗುವುದು ನಿನಗೆ ಇಷ್ಟ ಎನ್ನಿಸಿದರೆ ಸಂಪಾದಕರಿಗೆ ಕಳಿಸು, ಇಲ್ಲವಾದರೆ ಇದನ್ನು ಸುಟ್ಟು ಬೂದಿಯನ್ನು ಹೊಳೆಯಲ್ಲಿ ತೇಲಿಬಿಡು. ನಮ್ಮ ಸ್ನೇಹ ಮಾತ್ರ ಬದುಕಲಿ"

ಕವಿ ಜನಾಂಗ ಅನುಭವಿಸುತ್ತಿರುವ ಆದರೆ ಅಬೋಧವಾಗಿರುವ ಅವಸ್ಥೆಯನ್ನು ತನ್ನ ಕೃತಿಗಳಲ್ಲಿ ಮೂಡಿಸುತ್ತಾನೆ. ಈ ಪ್ರೇಮಗೀತೆಗಳಲ್ಲಿ ಜನಾಂಗದ ಸುಪ್ತಪ್ರಜ್ಞೆ ನುಡಿಯುವುದಿಲ್ಲ, ಮೈದಾಳುವುದಿಲ್ಲ. ಇಂತಹ ಸಾಹಿತ್ಯ ಸಮಾಜ ಮತ್ತು ಲೇಖಕನಿಗೆ ಇರಬೇಕಾದ ಸಾತತ್ಯದ ಕುರಿತು ವಸ್ತುನಿಷ್ಠವಾದ ವಿಮರ್ಶೆಯನ್ನು ಅರವಿಂದ ಅಜ್ಞೇಯನಿಗೆ ಬರೆದು ಕಳುಹಿಸುತ್ತಾನೆ. ಅರವಿಂದನಿಂದ ಬಂದ ವಿಮರ್ಶೆ, ಆತನ ವ್ಯಕ್ತಿತ್ವ, ಬದುಕು ಅಜ್ಞೇಯನನ್ನು ಆತನೊಳಗೆ ಅವಲೋಕನ ಮಾಡುವಂತೆ ಪ್ರೇರೇಪಿಸುತ್ತದೆ. ಆದರೆ, ಆತನ ಚರ್ಮದಂತೆ ಅಂಟಿಕೊಂಡಿದ್ದ ಸಂಸ್ಕಾರ ಪರಿಷ್ಕರಣದ ಎಲ್ಲ ಹಾದಿಗಳನ್ನು ತಳ್ಳಿಹಾಕುತ್ತದೆ. ಅಜ್ಞೇಯನ ಪತ್ರದ ಸಾಲುಗಳು ಮಾತ್ರ ಆತನ ಮನಸ್ಸನ್ನು 'ಪರಿಘ' (ಒಂದು ಬಗೆಯ ಆಯುಧ)ದಂತೆ ಇರಿಯುತ್ತದೆ, ಇರಿಯುತ್ತಲೇ ಇರುತ್ತದೆ.

ಕ್ರಿಯಾಶೀಲ ಬದುಕಿನ ಮೂಲಕವೇ ವ್ಯಕ್ತಿಯ ಅಸ್ತಿತ್ವವನ್ನು ಆವರಿಸಿರುವ ಪರಸ್ಪರ ಸಂಬಂಧವುಳ್ಳ ವಿವಿಧ ಅಂಶಗಳ ಮಥನ ದೇವರಗೆಣ್ಣೂರ ಅವರಿಗೆ ಬಹಳ ಮುಖ್ಯವಾದ್ದರಿಂದ ಅವರು ಶೋಧನೆಯ ಮಾರ್ಗಗಳ ಬಗ್ಗೆ ಹೆಚ್ಚು ಯೋಚಿಸುವುದು ವ್ಯಕ್ತವಾಗುತ್ತದೆ. ಹೀಗಾಗಿಯೇ ಬದುಕಿನ ಬಗ್ಗೆ ವ್ಯಕ್ತಿ ಮಾಡುವ ವಿಚಾರಗಳಾಗಲಿ, ಅದನ್ನು ಅರಿಯಲು ಅವರು ಅನುಸರಿಸುವ ಮಾರ್ಗಗಳಾಗಲಿ ಅತಿರೇಕದ ಅಂಚೊಂದನ್ನು ಮುಟ್ಟಿದೊಡನೆ ಅವುಗಳು ಬರೇ ಭ್ರಮೆಯ ಜಾಲದಲ್ಲಿ ಸಿಕ್ಕಿಕೊಂಡು ಬಿಡಬಹುದೆಂಬ ಆತಂಕ ಲೇಖಕರಿಗಿದೆ. ಬದುಕಿಗೆ ನೇರವಾಗಿ ಒಡ್ಡಿಕೊಳ್ಳುವುದು; ಶೋಧನೆಯಲ್ಲಿ ತೊಡಗಿದಾಗ ವ್ಯಕ್ತಿಗಳ ವಿಚಾರ, ಕ್ರಿಯೆಗಳ ಮಿತಿಗಳ ದರ್ಶನದಲ್ಲೇ ಅಹಂಕಾರವನ್ನು ಕಳೆದುಕೊಳ್ಳುವುದು; ಬೇರೆ ಕ್ರಿಯಾಶೀಲ ಮಾರ್ಗಗಳನ್ನು ಹುಡುಕಿಕೊಳ್ಳುವುದು; ಸತ್ಯವನ್ನು ಹಿಡಿದೇ ಬಿಡುತ್ತೇನೆಂಬ ಭ್ರಮೆಯನ್ನೂ, ಅಹಂಕಾರವನ್ನೂ

ಕ್ರಮೇಣ ತೊಡೆದುಕೊಳ್ಳುತ್ತ ಶೋಧನೆಯ ಪ್ರಕ್ರಿಯೆಯಲ್ಲೇ ಗಳಿಸಿಕೊಂಡಿರುವ ಅರಿವನ್ನು ಪರೀಕ್ಷಿಸಿಕೊಳ್ಳುವುದು — ದೇವರಗೆಣ್ಣೂರರ ಕಾಣ್ಕೆಯ ಸ್ವರೂಪ ಈ ಬಗೆಯದು ಎನಿಸುತ್ತದೆ. ಪರಿಘದ ವಿನಯ, ಅಜೇಯ, ಅರವಿಂದ ಇಂಥ ಪಾತ್ರಗಳು, ಅವುಗಳ ವರ್ತನೆಗಳು ಕಟ್ಟಿಕೊಡುವ ಸಂಕೀರ್ಣ ವಿನ್ಯಾಸವನ್ನು ಗಮನಿಸಿದಾಗ ಈ ಅಂಶ ಸ್ಪಷ್ಟವಾಗುತ್ತದೆ.

ಬದುಕಿನಲ್ಲಿ ಅಂತರ್ಗತವಾಗಿ ಸ್ವಯಂ ವಿರೋಧಗಳ ಪದರ ಪದರಗಳನ್ನು ತೆರೆದಿಡುವ 'ಪರಿಘ'ದಲ್ಲಿ ತಾತ್ವಿಕ ಹೊಸತನ ಸಾಧ್ಯವಾಗಿದ್ದರೆ, ಮೂಲತಃ ಅದು ವಾಸ್ತವವಾದದ ಮಿತಿಗಳನ್ನು ಮೀರಿ ಬೆಳೆದ ಕಾರಣದಿಂದಲೇ ಆಗಿದೆ. ವಾಸ್ತವವಾದದಲ್ಲಿ ನಿಜವಾಗಿ ಆದರ್ಶವೂ ಅಸಾಧ್ಯ; ಅಧ್ಯಾತ್ಮವೂ ಅಸಾಧ್ಯ. ಇದರಿಂದಾಗಿ ಹಲವು ಮಿತಿಗಳ ನಡುವೆಯೂ ಬದುಕಿನ ಪಕ್ವತೆ ಮತ್ತು ಬರಹದ ಪಕ್ವತೆಗಳೆರಡನ್ನೂ ಸಮರ್ಥವಾಗಿ ಸೂಚಿಸುವ ಅಂತ್ಯವನ್ನು 'ಪರಿಘ' ಕಾದಂಬರಿ ಸಾಧಿಸಿಕೊಂಡಿದೆ.

---

೨ನೇ ಅಡ್ಡರಸ್ತೆ, ಶಾರದಾನಗರ, ಮಾದೂವು,
ಕೊಟೆಕರ ವಿಭಾಗ, ಮಂಗಳೂರು, ದ.ಕ.

# ಮನೋವೈಕಲ್ಯದ ಸಹಜಸ್ಥಿತಿ




✦ ರೇಣುಕಾ ಮಂಜುನಾಥ್

ಅವನು ಕಂದಕವನ್ನು ಎದುರಿಸಲಿಲ್ಲ, ಬೆಟ್ಟ ಅಡ್ಡಗಟ್ಟಲಿಲ್ಲ. ಇಷ್ಟು ದಿನ ಹೊಳೆ ನಿರಾತಂಕವಾಗಿ ಹರಿದುಬರುತ್ತಿತ್ತು. ಇಂದು ಮಾತ್ರ ಅದು ಬತ್ತಿಹೋದಂತೆ ಅವನಿಗೆ ಅನ್ನಿಸಿತು.' ಕುಸುಮಾಕರ ದೇವರಗೆಣ್ಣೂರರು ತಮ್ಮ 'ನಿರಿಂದ್ರಿಯ' ಕಾದಂಬರಿಯ ಆರಂಭದಲ್ಲಿ ತಮ್ಮ ಕಥಾನಾಯಕನನ್ನು ಈ ರೀತಿಯಲ್ಲಿ ನಮ್ಮ ಮುಂದಿಡುತ್ತಾರೆ. ಕಥಾನಾಯಕನ ಈ ಆದಿಚಿತ್ರಣವನ್ನು ಲೇಖಕರು ಕಾದಂಬರಿಯ ಅಂತ್ಯದವರೆಗೂ ತಮ್ಮದೇ ಶೈಲಿಯಲ್ಲಿ ಸಮರ್ಥನೆ, ವಿಶ್ಲೇಷಣೆ, ವಿಮರ್ಶೆ, ಪುಟ್ಟಪುಟ್ಟ ಕತೆಗಳ ಮೂಲಕ ತೆರೆದಿಡುತ್ತಾರೆ.

'ನಿವೃತ್ತಿ'ಯ ಹೊಸ್ತಿಲಲ್ಲಿ ನಿಂತು ಬದುಕಿನ ಹಿನ್ನೋಟ, ಮುನ್ನೋಟಕ್ಕೆ ತೊಡಗಿಕೊಂಡ ಕಥಾನಾಯಕನಿಗೆ 'ಇಷ್ಟು ದಿನವೂ ತಾನಿದ್ದುದು ವೃತ್ತಿಯೆಂಬ ನಾಲ್ಕು ಗೋಡೆಗಳೊಳಗಿನ ಬೆಚ್ಚಗಿನ ಬದುಕು. ಇನ್ನು ಮುಂದೆ ಹೊಸ್ತಿಲಾಚೆಗಿನ ತೆರೆದ ಬಯಲಿನ ಬದುಕಿಗೆ ತಾನೆಷ್ಟು ತೆರೆದುಕೊಳ್ಳಬಲ್ಲೆ'ನೆಂಬ ಕಲ್ಪನೆ ನಡುಕ ಹುಟ್ಟಿಸುತ್ತದೆ. ಇಡೀ ಕಾದಂಬರಿ ಈ ನಡುಕದ ಕವಚ ಹೊದ್ದು ತಿರುವುಗಳೇ ಇಲ್ಲದ ಕತೆಯಾಗಿ ಹೆಸರೇ ಹೇಳುವಂತೆ 'ನಿರಿಂದ್ರಿಯ'ದ ಸ್ಥಿತಿಯನ್ನು ಓದುಗನಿಗೂ ಉಣಬಡಿಸುವುದರಲ್ಲಿ ಯಶಸ್ವಿಯಾಗಿದೆ.

'ನಿವೃತ್ತಿ' ಎಂಬುದು ನಿರಾಳವಾಗದೆ ಕರಾಳವಾಗುತ್ತಿದೆಯೆಂಬ ಅರಿವು ಒಮ್ಮೆಲೇ ಮುತ್ತಿಕೊಂಡು ತಾನು ಈಜುತ್ತಿದ್ದ ಹೊಳೆ ಬತ್ತಿಹೋದಂತಾದ ಸ್ಥಿತಿಯಲ್ಲಿ ಕಥಾನಾಯಕ ರೊಳ್ಳಿ 'ಇಷ್ಟು ದಿನದ ತನ್ನ ಬಾಳು ಸಾರ್ಥಕ ಬದುಕಲ್ಲವೇ?' ಎಂಬ ಸ್ವಯಂ ವಿಶ್ಲೇಷಣೆಗೆ ತೊಡಗಿಕೊಳ್ಳುತ್ತಾನೆ. ಈ ವಿಶ್ಲೇಷಣಾ ಪ್ರಕ್ರಿಯೆಯಲ್ಲಿ ಅವನ ಅನಿಸಿಕೆಗಳನ್ನು ನಮ್ಮ ಮುಂದಿಡುವ ಲೇಖಕರು ಜೊತೆಜೊತೆಗೇ ಅದರ ವಿಸ್ತೃತರೂಪವಾಗಿ ಕನಸು, ಹಗಲುಗನಸು, ಕಂಡು ಕೇಳಿದ ಪ್ರಾಣಿ-ಪಕ್ಷಿಗಳ ಕತೆಗಳನ್ನು ದಂಡಿಯಾಗಿ ಬಳಸಿ ನಮ್ಮ ಮುಂದೆ ಹರಡುತ್ತಾರೆ. ಇವರ ಮಧ್ಯೆ ಅವನ ಕೆಲವೇ ಅನಿವಾರ್ಯ ಮನುಷ್ಯ ಸಂಬಂಧಗಳಾದ ಹೆಂಡತಿ, ಮಕ್ಕಳು, ಸಹೋದ್ಯೋಗಿಗಳು, ಒಡಹುಟ್ಟಿದವರು, ಗುರುಗಳನ್ನು ತಂದು ಅವರು ಸೃಷ್ಟಿಸುವ ಟೀಕೆ, ಗೊಂದಲಗಳ ಮೂಲಕ ಅವನ ನಿರಿಂದ್ರಿಯ ಪಾಡನ್ನು ಬಿಂಬಿಸುತ್ತಾರೆ.

ಬದುಕಿಗೊಂದು ಕಾಯಕ, ಕಾಯಕದ ಚೌಕಟ್ಟಿನೊಳಗೆ ಕಟ್ಟುಪಾಡಿನ ಬದುಕು, ರೊಳ್ಳಿ ತಾನೇ ಹಾಕಿಕೊಂಡ ಈ ಕಟ್ಟುಪಾಡುಗಳೆಲ್ಲ ಅವನ ಬದುಕಿನ ಸುರಕ್ಷತೆಯ ರಕ್ಷಣಾ ಕವಚವಾಗಿತ್ತೇ ವಿನಾ ಅದರಲ್ಲಿ ಅಸ್ತಿತ್ವಕ್ಕೆ ನಿರಂತರ ಕಾಣಿಕೆ ನೀಡುವ ಸಮಾಜ ಹಾಗೂ ಕುಟುಂಬಕ್ಕೆ ಮರುಕಾಣಿಕೆ ನೀಡುವ ಗೋಜೇ ಇರಲಿಲ್ಲ. ಈ ರೀತಿ ಬದುಕಿದ ರೊಳ್ಳಿಗೆ ಬದುಕೆಂಬ ಮಹಾನಗರದಲ್ಲಿ ಏನೆಲ್ಲ ಇದೆಯೆಂದು ತಿಳಿಯುವ ಕುತೂಹಲವಿಲ್ಲ. ಇಂದ್ರಿಯ ಸಮ್ಮಾನ ಬಯಕೆಗಳನ್ನು ಪೂರೈಸಲೆಡೆಯಿಲ್ಲ. ಸಾಹಸದ ಮಾತೇ ಇಲ್ಲ. ಸಂತೋಷ, ಖುಷಿಗೆ ಸ್ಥಾನವೇ ಇಲ್ಲ. ಜೀವನ ಸೌಂದರ್ಯಕ್ಕೆ ವಿಮುಖವಾಗಿ ತನ್ನ ದೃಷ್ಟಿಯಲ್ಲಿ ಲಾಭದಾಯಕವೆನಿಸಿದ್ದನ್ನು ವರ್ಜಿಸುತ್ತಾ ಬಂದ ರೊಳ್ಳಿಗೆ ಬರಡಾದ ಬದುಕು ಅದೆಷ್ಟು ದುರ್ಭರವಾಗಬಹುದೆಂಬ ಊಹೆಯೂ ಇರಲಿಲ್ಲ. ದಶಕಗಳ ಕಾಲ ವೃತ್ತಿ ಪ್ರಧಾನಿಸಿದ ದಿನಚರಿಯಲ್ಲೇ ದಿನದೂಡಿದವನಿಗೆ ನಿವೃತ್ತಿಯ ನಂತರದ ಕಾಲಹರಣ ಎಂತಹ ಸಮಸ್ಯೆಯನ್ನೊಡ್ಡುತ್ತದೆಂಬ ಕಲ್ಪನೆ ತನ್ನೆದುರು ನಿಂತದ್ದೇ ತಾನು ನಿವೃತ್ತಿಯ ಹೊಸ್ತಿಲಿಗೆ ಬಂದು ನಿಂತಾಗ.

ಬದುಕನ್ನು ವಿಸ್ತರಿಸಿಕೊಳ್ಳುವುದು ಸಂಕುಚಿತಗೊಳಿಸಿಕೊಳ್ಳುವುದು ಎರಡೂ ಸಹ ನಮ್ಮ ಸಾಮರ್ಥ್ಯ, ಅಭಿರುಚಿ, ಅಭಿಲಾಷೆಗಳನ್ನವಲಂಬಿಸಿರುತ್ತದೆ. ಆದರೆ ಮನುಷ್ಯ ಸಹಜ ಬದುಕಿಗೆ ಬೇಕಾದ ಕನಿಷ್ಠ ಪ್ರಮಾಣದ ಕೊಡುಕೊಳ್ಳುವಿಕೆಯೂ ಇಲ್ಲದೆ ನಿರಿಂದ್ರಿಯನಾಗಿ ಬದುಕುವ ಮನುಷ್ಯನ ಬಾಳಿನಲ್ಲಿ ಅರ್ಥ ಹುಡುಕುವುದು ಅದೆಷ್ಟು ವ್ಯರ್ಥವೆನ್ನುವುದನ್ನು ಈ ಕಾದಂಬರಿ ಬಿಂಬಿಸುತ್ತದೆ ಇಡೀ ಕಥೆಯ ವ್ಯಾಪ್ತಿ ರೊಳ್ಳಿಯ ಮನೋಲೋಕದ ಸುತ್ತ ಗಿರಕಿಹೊಡೆಯುತ್ತದೆ. ಸಮಾಜದಲ್ಲಿ ನಮ್ಮ ಸುತ್ತ ಕಾಣುವ ರೊಳ್ಳಿಯಂತಹ ಪಾತ್ರಗಳ ಮನೋಲೋಕವನ್ನು ಪದರಪದರವಾಗಿ ನಮ್ಮ ಮುಂದಿಡುವ ಕುಸುಮಾಕರರಿಗೆ ಇಂತಹ ವ್ಯಕ್ತಿಗಳು ಹುಟ್ಟಿಸಬಹುದಾದ ಹಾಸ್ಯಮಯ ಹಾಗೂ ವಿಪರ್ಯಾಸಕರ ಘಟನೆಗಳ ಮೂಲಕ ಓದುಗರನ್ನು ರಂಜಿಸಬೇಕೆನಿಸುವುದಿಲ್ಲ. ಕಾದಂಬರಿ ವಿಷಯವೇ ಒಣಭೂಮಿಯಾಗಿರುವುದರಿಂದ ನೀರಸವಾದ ರೋಚಕ ರಹಿತ ಪಯಣ ಓದುಗನದಾಗುತ್ತದೆ. ಆದರೆ ಲೇಖಕರು ಬದುಕನ್ನು ಗಹನವಾಗಿ, ಆಳವಾಗಿ ಗ್ರಹಿಸಿರುವುದು ಅವರ ನಿರೂಪಣೆಯಲ್ಲಿ ವ್ಯಕ್ತವಾಗುತ್ತದೆ. ಇಡೀ ಕಾದಂಬರಿಯನ್ನು ಓದುವಾಗ ಓದುಗನಿಗೆ ಪರಿಪಕ್ವ ಮನಸ್ಸಿನ ಹಿರಿಯರೊಂದಿಗೆ ಕುಳಿತು ವ್ಯಕ್ತಿಯೊಬ್ಬನನ್ನು ಆಧಾರವಾಗಿಟ್ಟುಕೊಂಡು ಬದುಕಿನ ವಿವಿಧ ಮಗ್ಗಲುಗಳನ್ನು ಅಗೆದು, ಬಗೆದು, ಶೋಧಿಸುವ ಅನುಭವವಾಗುತ್ತದೆ. ಜೊತೆಜೊತೆಗೇ ಮನುಷ್ಯ ಜನ್ಮದ ಸಾರ್ಥಕತೆ ಕಾಣಲು ಬೇಕಾದ ಸಲಹೆ, ಸೂಚನೆ ರವಾನೆಯಾಗುತ್ತದೆ.

ಪ್ರತಿ ತಲೆಮಾರೂ ತನ್ನ ಕಿರಿತಲೆಮಾರಿನಿಂದ ಅನುಭವಿಸುವ ಕಿರಿಕಿರಿ ರೊಳ್ಳಿಗೂ ತಪ್ಪುವುದಿಲ್ಲ. ರೊಳ್ಳಿಯ ಶಿಸ್ತುಬದ್ಧ ಜೀವನದಿಂದಾಗಿಯೇ ಒಂದು ನೆಲೆ ಕಂಡ ಮಕ್ಕಳಿಂದ ಪ್ರಶಂಸೆಗಿಂತ ಟೀಕೆಯೆ ಮುಂದಾಗುತ್ತದೆ.

'ಸಾಹಸವೆಂಬುದೇ ಇಲ್ಲ. ಬಾಲ್ಯದಲ್ಲಿ ತಾಯಿ-ತಂದೆ ರಕ್ಷೆ. ತಾರುಣ್ಯದಲ್ಲಿ ನೌಕರಿಯ ಗೂಡಿನಲ್ಲಿ ಕಣ್ಣು ಕಟ್ಟಿಕೊಂಡು ಸುತ್ತುತ್ತಿರುವುದು, ವೃದ್ಧಾಪ್ಯದಲ್ಲಿ ನಿವೃತ್ತಿ ವೇತನದ ಗಂಜಿ, ಇಂತಹವರನ್ನು ನೋಡಿದರೆ ಕನಿಕರ ಉಂಟಾಗುತ್ತದೆ. ಸೌಂದರ್ಯ ದೃಷ್ಟಿಯಿಲ್ಲದ ಕುರುಡರನ್ನು ತೆಗೆದುಕೊಂಡು ಮಾಡುವುದೇನು?

ಯಾಕಾದರೂ ಹುಟ್ಟಿದರೋ? ಇಂತಹ ಸಪ್ಪೆ ಬಾಳಿನಲ್ಲಿ ಸುರಿದುಕೊಳ್ಳುವ ಸೌಭಾಗ್ಯವಾದರೂ ಏನು?' ಎಂದೊಬ್ಬ ಮಗ ರೊಳ್ಳಿಯನ್ನು ಟೀಕಿಸಿದರೆ ಮತ್ತೊಬ್ಬ ಮಗ "ನಿಮಗೇನು ಆಸೆಯೆ? ವೈರಾಗ್ಯದ ಜೀವಂತ ಅವತಾರ ನೀವು, ಸುಖಿ ನಿಮ್ಮ ಬಳಿ ಬರುವಾಗ ಹೆದರಿ ಬರಬೇಕು. ನಿಮ್ಮನ್ನು ಕಂಡು ಅವರ ಮುಗುಳುನಗು ಕಮರಿಹೋಗುತ್ತವೆ. ಒಂದು ಅಭಿರುಚಿಯೆ? ಒಂದು ಆಸಕ್ತಿಯೆ? ಒಂದು ಹವ್ಯಾಸವೇ? ಇಂತಹ ನೀರಿನ ಬದುಕಿಗೆ ಹೆಚ್ಚು ಹಣವಾದರೂ ಏಕೆ? ನಮ್ಮ ಪುಣ್ಯ ನಿಮ್ಮ ಜೀವನ ದೃಷ್ಟಿ ನಮಗೆ ಬರಲಿಲ್ಲ. ನಿಮ್ಮ ಹೆಜ್ಜೆಯೇ ದೊಡ್ಡದಲ್ಲ. ನೀವೂ ಹಾಳಾದಿರಿ. ನಮ್ಮನ್ನಂತೂ ಮೊದಲೇ ಹಾಳು ಮಾಡಿದಿರಿ." ಎಂದು ಹೀಯಾಳಿಸುತ್ತಾನೆ.

ರೊಳ್ಳಿಗೆ ಮಕ್ಕಳ ಇಂತಹ ಇರಿಯುವ ಮಾತುಗಳು ಸದಾ ಸ್ವಯಂ ವಿಮರ್ಶೆಗೆ ತೊಡಗಿಸುತ್ತಿದ್ದವು. 'ತಾನು ಒಂದು ಬಗೆಯ ಸ್ವಯಂಪೂರ್ಣ ಬದುಕು ಬಾಳುತ್ತಾ ಬಂದವ. ಯಾರಿಗೂ ಒಂದು ಉಪಕಾರ ಮಾಡಿದವನಲ್ಲ. ಯಾರ ಮದುವೆಗೂ ಹೋದವನಲ್ಲ. ಯಾರ ಅಂತ್ಯಕ್ರಿಯೆಗೂ ಹೋಗಿರಲಿಲ್ಲ. ಒಂದು ಅಭಿನಂದನಾ ಪತ್ರ ಬರೆದಿಲ್ಲ. ಒಂದು ಸಾಂತ್ವನ ಪತ್ರ ಬರೆದಿಲ್ಲ. ತಾನು ಒಬ್ಬನೇ ಒಬ್ಬ. ಅದರೂ ದುಡಿದ ಹಣವನ್ನೆಲ್ಲ ಬ್ಯಾಂಕಿನಲ್ಲಿಟ್ಟ. ಯಾರನ್ನೂ ಅವಲಂಬಿಸಿಲ್ಲ. ಯಾರ ಮೇಲೂ ಸಾಲದ ಭಾರ ಹೊರಿಸಿಲ್ಲ...' ಎಂದು ಯೋಚಿಸುವ ರೊಳ್ಳಿ ಎಲ್ಲಿಯೂ ಮಾನ್ಯನಾಗದೆ ತೊಳಲಾಟದಲ್ಲೇ ಉಳಿದು ಹೋಗುವನು. ಪ್ರತಿ ಪುಟದಲ್ಲೂ ಲೇಖಕರೇ ಇಂತಹ ವಿಶ್ಲೇಷಣೆಗೆ ತೊಡಗುವುದರಿಂದ ಓದುಗನಿಗೆ ಹೊಸ ಹೊಳಹು, ಕುತೂಹಲ, ವಿಸ್ಮಯ, ತಮಾಷೆಗಳ್ಯಾವುವೂ ದಕ್ಕದೆ ರಸಾಸ್ವಾದಕ್ಕಿಂತ ತರಗತಿಯಲ್ಲಿ ಕುಳಿತು ಸಮಗ್ರ ಬೋಧನೆಗೆ ಒಳಗಾದಂತಾಗುತ್ತದೆ.

ವೃತ್ತಿ ಕವಚವನ್ನು ಕಳಚಬೇಕಾಗಿ ಬಂದಾಗ ಬದುಕಿನ ಸಂತೆಯಲ್ಲಿ ತಾನೆಷ್ಟು ನಿರುಪಯುಕ್ತ ಸರಕೆಂಬುದನ್ನು ಮನಗಾಣುವುದು ಹಾಗೂ ಇಷ್ಟು ದಿನದ ಕಟ್ಟುಪಾಡಿನ ಬದುಕಿನ ಬಗೆಗೆ ಅಹಂಕಾರ, ಹೆಮ್ಮೆ ಬೆಳೆಸಿಕೊಂಡು ಬದುಕು ಸಾಗಿಸಿದವನಿಗೆ 'ಅದೆಲ್ಲವೂ ಮಿಥ್ಯೆ. ತಾನೀಗ ಎಲ್ಲಿಗೂ ಸಲ್ಲದವನೆಂಬುದೇ ಸತ್ಯ' ಎಂಬ ಅರಿವು ರೊಳ್ಳಿಗೆ ಭಯಾನಕವಾಗುತ್ತದೆ. ಈ ಭಯಾನಕ ಚಿತ್ರಣವು ಇಂತಹ ಸೇಫ್ ಲೈಫ್ ಅನ್ನು ಆರಿಸಿಕೊಂಡ ಮೇಲೆ ಸಕಾರಾತ್ಮಕ ಪರಿಣಾಮ ಬೀರುವುದರಲ್ಲಿ ಸಂಶಯವಿಲ್ಲ. ಹಾಗೆ ನೋಡಿದರೆ ಇಡೀ ಕಥೆಯಲ್ಲಿ ಎಲ್ಲಿಯೂ ಸಹ ಆಗಬಾರದಂತಹ ಆಘಾತ, ಅಪಘಾತ, ಅನಾಹುತ, ಪ್ರಮಾದ, ಕ್ರೌರ್ಯ ಸಂಭವಿಸುವುದಿಲ್ಲ. ಎಲ್ಲವೂ ಮಾನಸಿಕ ನೆಲೆಯಲ್ಲಿಯೇ ಹೆಪ್ಪುಗೊಂಡು ಮನಹಿಂಡುತ್ತದೆ. ಮನುಷ್ಯ ಸಂಬಂಧಗಳನ್ನು ಹೊಸೆದು ಬೆಸೆಯಲು ನೀರೆರೆಯಬೇಕಾದ ಮನೋನೆಲೆ ಇಲ್ಲದವರಿಂದ ಜನ್ಮ ಸಾರ್ಥಕತೆ ಸಾಧ್ಯವೇ ಎಂಬುದನ್ನು ಚರ್ಚಿಸುತ್ತಾ ಅದಕ್ಕೆ ಪೂರಕವಾದ ಪಾತ್ರಗಳನ್ನು ಅಂತ್ಯಭಾಗದಲ್ಲಿ ಸೃಷ್ಟಿಸಿ ರೊಳ್ಳಿಯ ಸಾದಿನಿಯ ಸಂಸಾರದ ಚಿತ್ರಣದೊಂದಿಗೆ ಮಾದರಿ ಬದುಕನ್ನು ನಮ್ಮ ಮುಂದಿಡುತ್ತಾರೆ. ಇದೇ ಕಾದಂಬರಿಯ ಉದ್ದೇಶವೆಂಬುದು ಸ್ಪಷ್ಟವಾದರೂ ಸಹ ರೊಳ್ಳಿಯ ಮನೋಲೋಕಕ್ಕೆ ನಮ್ಮನ್ನೊಯ್ದು ಆ ಮನೋವಲಯವನ್ನು ಪದೇಪದೇ ಪೋಸ್ಟ್‌ಮಾರ್ಟಂ ಮಾಡುತ್ತ ಮನೋವೈಕಲ್ಯದ ಸಹಜ ಸ್ಥಿತಿಯನ್ನು ಕಾಣಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ.

ಕೆಲವೊಮ್ಮೆ ಸರಳವೆನಿಸಿ, ಮತ್ತೆ ಕೆಲವೊಮ್ಮೆ ಗೋಜಲೆನಿಸುವ ಈ ಕೃತಿ ವಿಚಾರಪೂರ್ಣವೆನಿಸದೇ ಇರುವುದಿಲ್ಲ. ಆದರೆ ಇಂದಿನ ಜಾಗತಿಕ ಸಂದರ್ಭದಲ್ಲಿ ಬದಲಾಗುತ್ತಿರುವ ಸಾಮಾಜಿಕ ಗತಿಯೊಂದಿಗೆ ಈ ಕಾದಂಬರಿ ಸಾರ್ವಕಾಲಿಕವಾಗುಳಿಯುವುದೇ ಎಂಬ ಸಂದೇಹವಂತೂ ಉಳಿಯುತ್ತದೆ. ಸೋಜಿಗದ ಸಂಗತಿಯೆಂದರೆ ಓದುತ್ತಾ ಓದುತ್ತಾ ಓದುಗನಿಗೆ ಅದೊಂದು 'ಸ್ಪಿರಿಚುಯಲ್ ಜರ್ನಿ'ಯಾಗಿಬಿಡುವುದು ಕಾದಂಬರಿಕಾರರ ವೈಚಾರಿಕ ಪಕ್ವ ಹೃದಯದಾಳದಿಂದ ಸ್ಫುರಿಸಿದ್ದೆಂಬುದನ್ನು ಸಾಬೀತುಪಡಿಸುತ್ತದೆ.

---

ಶೈಲಿ, ೧೧೧೪, ೧೧ನೇ ಮುಖ್ಯರಸ್ತೆ, ಬಸವೇಶ್ವರನಗರ,
೧ನೇ ಬ್ಲಾಕ್, ೩ನೇ ಹಂತ, ಬೆಂಗಳೂರು - ೫೬೦ ೦೭೯

# 'ಬಯಲ ಬಸಿರಿ'ನ ಸುರಕ್ಷಿತ ತೊಟ್ಟಿಲು




✦ ಸುನಂದಾ ಪ್ರಕಾಶ ಕಡಮೆ

**ಕ**ನ್ನಡ ಕಾದಂಬರಿ ಕ್ಷೇತ್ರದಲ್ಲಿ ನಾವು ಎಳೆಯರು ಕುತೂಹಲದಿಂದ ಹಾಗೂ ಅಷ್ಟೇ ಶ್ರದ್ಧೆಯಿಂದ ಓದ ಬೇಕಾಗಿರುವ ನವ್ಯದ ಅನನ್ಯ ಕಾದಂಬರಿಕಾರ ಎಂದೇ ಹೆಸರಾಗಿರುವ ಮಹತ್ವದ ಲೇಖಕ ಕುಸುಮಾಕರ ದೇವರಗೆಣ್ಣೂರ.

ಪ್ರಖರ ವೈಚಾರಿಕತೆ ಹಾಗೂ ಆತ್ಮ ಮೂಲದ ಸಂವೇದನೆ ಇರುವ ದೇವರಗೆಣ್ಣೂರರ ಐದನೆಯ ಈ ಪುಟ್ಟ 'ಬಯಲು-ಬಸಿರು' ಕಾದಂಬರಿ ೨೦೦೫ರಲ್ಲಿ ಸಾಹಿತ್ಯ ಭಂಡಾರ ಪ್ರಕಾಶನದಿಂದ ಹೊರಬಂದಿದೆ.

ಈ ಕೃತಿ ತನ್ನ ಮಡಿಲಲ್ಲಿ ಹಿಡಿದಿಟ್ಟುಕೊಂಡಿರುವ ತತ್ವಶಾಸ್ತ್ರ ಮಾನವಶಾಸ್ತ್ರ ಸಾಮಾಜಿಕ ವಿಜ್ಞಾನ ಮುಂತಾದವು ಲೇಖಕರಿಗೆ ಅಖಂಡ ಬದುಕಿನ ಬಗ್ಗೆ ಇರುವ ಆಳವಾದ ಚಿಂತನೆ ಹಾಗೂ ದರ್ಶನಗಳನ್ನು ಪ್ರತಿಪಾದಿಸುತ್ತದೆ.

ಹೀಗೆ 'ಸಂಕಿರಣ'ಕ್ಕೆ ಬರೆಯಬೇಕಾಗಿ ಬಂದಾಗ, ಒಂದಕ್ಕಿಂತ ಹೆಚ್ಚು ಬಾರಿ ಓದುವಾಗಿನ ಮುಕ್ತತೆ, ಹೊಸ ಹೊಸ ಲಯದಲ್ಲಿ ಕಾದಂಬರಿ ಪ್ರತಿ ಸಾರೆ ಬೇರೆಯದೇ ದಿಕ್ಕಿನಲ್ಲಿ ಬಿಚ್ಚಿಕೊಳ್ಳುವಾಗಿನ ಸೋಜಿಗ, ಒಂದು ಕಾವ್ಯದಂತೆ ಸವಿಯಲು ಸಾಧ್ಯವಾದ ಬಗೆ, ಇನ್ನೂ ನನ್ನಲ್ಲಿ ಅದು ಉಳಿಸಿದ ಗುಂಗು ಇವೆಲ್ಲವೂ ಈ ಕೃತಿಯೆಂದರೆ ಪ್ರೀತಿ ಹುಟ್ಟಲು ಮುಖ್ಯ ಕಾರಣಗಳು.

'ಬಾನಿನಲ್ಲಿ ಚಂದ್ರಬಿಂಬ ಹೊಳೆದರೇನು? ನನ್ನ ಕಿಟಕಿಯಲ್ಲಿ ಕಾಣುವ ಚಂದ್ರ ಮಾತ್ರ ನಿಜವಾದ ಚಂದ್ರ' ಹೀಗೆ ಆಪ್ತವಾಗಿ ಓದುಗರನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುವ ಕಾದಂಬರಿಯಲ್ಲಿ ಕಲಾತ್ಮಕತೆ ಹಾಗೂ ಚಿಂತನಶೀಲತೆ ಸಮನಾಗಿ ಮೂಡಿನಿಂತಿದೆ. ಪ್ರತಿಮೆಗಳ ಮೂಲಕವೇ ಕಥಿಸುವ ಗುಣ ಪಡೆದುಕೊಂಡ ಈ ಕೃತಿಯ ಬರವಣಿಗೆ, ತೀರ ತನ್ಮಯನಾಗಿ ಹಾಗೂ ಮಗು ಸಹಜ ಬೆರಗಿನಿಂದ ಓದಿದಾಗ ಮಾತ್ರ, ಸಹೃದಯನನ್ನು ತನ್ನೆಡೆಗೆ ಸೆಳೆದುಕೊಳ್ಳುವಲ್ಲಿ ಯಶಸ್ವಿಯಾಗುತ್ತದೆ.

ನಾರ್ಮನ್ ಎಂಬ ಅಮೆರಿಕ ಸಂಜಾತ ಶ್ರೀಮಂತ ಯುವಕ, ತಂದೆ-ತಾಯಿಗಳ ಪ್ರೀತಿ ಮತ್ತು ಕಾಳಜಿಯಿಂದ

ವಂಚಿತನಾಗಿ, ಬದುಕಿನಲ್ಲಿ ವೈರಾಗ್ಯ ತಾಳಿ, ತನ್ನ ನೆಲವಾದ ಆ ಭೂಮಿಯ ಮೇಲಿನ ಸ್ವರ್ಗ (ಭಾರತದ ಜನ ಅಂದುಕೊಂಡಂತೆ)ವನ್ನು ತೊರೆದು, ಮಾನಸಿಕ ಶಾಂತಿಯನ್ನು ಅರಸುತ್ತ ಭಾರತಕ್ಕೆ ಬಂದಿರುತ್ತಾನೆ. ಜಗತ್ತನ್ನೇ ಗೆಲ್ಲುವ ಇಲ್ಲಿಯ ಆಧ್ಯಾತ್ಮ ಶಕ್ತಿಯ ಮೇಲೆ ನಾರ್ಮನ್‌ನಿಗೆ ಅಗಾಧವಾದ ನಂಬಿಕೆ.

ತನ್ನ ಬಸಿರಿನಿಂದ ಬಯಲಿಗೆ ಬಿಟ್ಟುಕೊಟ್ಟ ತಾಯಿ ಜೆಸ್ಸಿ, ಮಗ ಯುವಕನಾಗುವ ಹೊತ್ತಿಗೆ 'ನೀನೀಗ ಬೆಳೆದಿದ್ದಿ, ಈ ಬಾಳಿನಲ್ಲಿ ಗೆಲ್ಲುತ್ತಿ' ಎಂದು ಹೇಳಿ ಬಿಟ್ಟು ಹೊರಟ ಮಾತೊಂದು ಅವನನ್ನು ಸದಾ ಜಾಗೃತವಾಗಿಟ್ಟರುತ್ತದೆ. ಇಲ್ಲಿ ಹತ್ತಾರು ವರ್ಷಗಳ ವರೆಗೆ ಹಲವು ಮಠಗಳನ್ನೂ, ಆಶ್ರಮವನ್ನೂ ಕೆಲ ಸ್ವಾಮಿ-ಸನ್ಯಾಸಿಗಳನ್ನೂ ಕಂಡು ಪ್ರಶ್ನಿಸಿ, ಮಥಿಸಿ, ತೃಪ್ತಿಕಾಣದೇ ನಾರ್ಮನ್ ಬಳಲುತ್ತಿರುತ್ತಾನೆ.

ತಾನು ಪಡೆದುಕೊಳ್ಳಬೇಕಾಗಿರುವ ಬೆಳಕು ತನಗೆ ನಿಜವಾಗಿಯೂ ದಕ್ಕುತ್ತದೆಯೇ ಎಂಬ ಸಂಶಯ ಅವನನ್ನು ಆಗಾಗ ಕಾಡುತ್ತಿರುತ್ತದೆ. ಅಮೆರಿಕೆಯ ಅನ್ನೈಸರ್ಗಿಕ ಮಾದಕ ದ್ರವ್ಯಗಳು ಮನುಷ್ಯನ ಆನಂದದ ವಲಯವನ್ನು ತಾತ್ಕಾಲಿಕವಾಗಿ ಉದ್ರೇಕಿಸುವಂಥದು, ಆದರೆ ಭಾರತದ ಧ್ಯಾನ-ಆಧ್ಯಾತ್ಮಗಳು ನೈಸರ್ಗಿಕವಾಗಿಯೇ ಮನುಷ್ಯನ ಅಂತರಂಗವನ್ನು ಶಾಶ್ವತವಾಗಿ ಹಿಗ್ಗಿಸುತ್ತವೆ. ಎಂದರಿತ ನಾರ್ಮನ್‌ನನ್ನು ತನ್ನ ಮನಸ್ಸು ಒಂದು ಶಕ್ತಿ, ಶಕ್ತಿ ಸಂಚಯ ಬಲ್ಲವನಿಗೆ ದಣಿವಿಲ್ಲ ಎಂಬ ಉತ್ಸಾಹ ಪುನಃ ಪುನಃ ಗಟ್ಟಿಗೊಳಿಸುತ್ತದೆ.

ಜೈನ ಮುನಿಗಳು ಕೈಗೊಳ್ಳುವ ಸಲ್ಲೇಖನ ವ್ರತದ ಕುರಿತು ಅಪಾರ ಆಸಕ್ತಿ ಇರಿಸಿಕೊಂಡ ನಾರ್ಮನ್, ಬದುಕಿನ ನಿಗೂಢಗಳನ್ನು ಅಭ್ಯಸಿಸುತ್ತಿರುವಾಗ ಒಂದೆಡೆ 'ಹಿಂದಣವನ್ನು ಮರೆ. ಮುಂದಿನದನ್ನು ಯೋಚಿಸದಿರು, ಆಗ ಬಾಳು ನಿನ್ನದು, ಪ್ರತಿಯೊಂದು ಕ್ಷಣವನ್ನು ಮಾತ್ರ ಬದುಕು' ಎಂಬ ಝೆನ್ ಮಾರ್ಗದ ನೀತಿ ಅವನಲ್ಲಿ ವಿಶ್ವಾಸ ತುಂಬುತ್ತದೆ.

ಹೀಗೊಂದು ಸಮಯದ ಕಾಲಾವಕಾಶದೊಳಗೆ, ಸೆರೆಮನೆಯಂಥ ಆಶ್ರಮದ ಬಸಿರಿನಲ್ಲಿ ನಾರ್ಮನ್ ಧ್ಯಾನಸ್ಥ ಸ್ಥಿತಿಯಲ್ಲಿದ್ದಾಗ ತನ್ನ ಬದುಕಿನ ಭೂತ-ಭವಿತ್ಯದ ಚಿತ್ರಗಳನ್ನು ಟೀವಿ ಪರದೆಯ ಮೇಲೆ ಕಾಣುವಂತೆ ಲೋಕಾನುಭವದಿಂದ ಅನುಭವಿಸಿ ಸಿದ್ಧಿ ಪಡೆದು ನಂತರ ಪೂರ್ವಾಶ್ರಮದಲ್ಲಿ 'ಅನಿಕೇತಾನಂದ'ನಾಗಿ ಬೆಳಕು ಕಾಣುತ್ತಾನೆ.

ಭಕ್ತ ಸಮುದಾಯ ಅನಿಕೇತಾನಂದನ ಮಾತು ಆಲಿಸಲು, ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಸಾಗರದಂತೆ ಹರಿದುಬರುತ್ತದೆ. ದೇಶ-ವಿದೇಶಗಳಲ್ಲಿ ನಡೆದ ಪ್ರವಚನಗಳ ಧ್ವನಿ ಸುರುಳಿಗಳು ಅತ್ಯಧಿಕ ಸಂಖ್ಯೆಯಲ್ಲಿ ಮಾರಾಟವಾಗುತ್ತದೆ. ಸಾಕಷ್ಟು ಹಣ ಸೇರಿಕೊಂಡು ಸ್ವಂತ ಆಶ್ರಮ ಕಟ್ಟಿಕೊಂಡು ಭಾರತದಲ್ಲಿಯೇ ನೆಲೆ ನಿಂತ ನಾರ್ಮನ್, ಜೀವನ ಚರಿತ್ರೆ ಬರೆದ ತನ್ನ ಅನುಯಾಯಿ ವಿನಯಾನಂದ ಎಂಬುವವನಿಂದ ದೈವೀ ಅವತಾರ ಪುರುಷನಂತೆಯೂ, ಮಹಾನ್ ಸಾಧಕನಂತೆಯೂ ನಿರ್ಮಾಣಗೊಂಡುಬಿಡುತ್ತಾನೆ.

ನಂತರ ಜಾಗತೀಕರಣ, ಅಣ್ವಸ್ತ್ರ ನೀತಿ, ಮುಕ್ತ ವ್ಯಾಪಾರ ನೀತಿ ಬಾಂಬು ಯುದ್ಧ ಮುಂತಾದ ಸಂದಿಗ್ಧದ ಮಧ್ಯೆಯೂ ವ್ಯಕ್ತಿಯೊಬ್ಬ ಈಗಷ್ಟೇ ಹುಟ್ಟಿದ ಶಿಶುವಿನಂತೆ ಹೇಗೆ ಮಾನಸಿಕ ಶಾಂತಿಯನ್ನು ಪರ್ಯಾಯವಾಗಿ ಕಾಪಾಡಿಕೊಳ್ಳಬಲ್ಲ ಎಂಬುದು ಕಾದಂಬರಿಯುದ್ದಕ್ಕೂ ಸ್ಫುಟವಾಗಿ ಚಿತ್ರಿತವಾಗಿದೆ. ದೇಶದೇಶಗಳ ನಡುವಿನ ಛಿದ್ರತೆ, ಮುಖ್ಯವಾಗಿ ಅನಿಕೇತಾನಂದನ ಕನಸಿನಲ್ಲಿ ಆಗಾಗ ತೂರಿ ಬರುವ ಅಮೆರಿಕೆ ಮತ್ತು ರಷ್ಯಾಗಳೆಂಬ ಎರಡು ಬಲಾಢ್ಯ ರಾಷ್ಟ್ರಗಳ ನಡುವಿನ ಸಂಘರ್ಷ, ಬಿರುಕುಗಳು ಹೀಗೆ ಮಾನವೀಯ ಮೌಲ್ಯಗಳನ್ನು ನಾಶ ಮಾಡುತ್ತಾ, ಮನುಷ್ಯ-

ಮನುಷ್ಯನ ನಡುವಿನ ಸಂವೇದನಾಶೀಲ ಸಂಬಂಧವನ್ನು ಅವನತಿಗೀಡುಮಾಡುತ್ತಾ ಸಾಗಿರುವುದು ಇಲ್ಲಿ ಮನೋಜ್ಞವಾಗಿ ಹಾಗೂ ಸಾಂಕೇತಿಕವಾಗಿ ಹಿಡಿದಿಡಲಾಗಿದೆ.

'ಅನಿಕೇತಾನಂದ'ನ ಅಂತರ್ಮುಖೀ ತುಮುಲಗಳ ಜತೆಜತೆಗೇ ನಮ್ಮ ಅಂತರಂಗದಲ್ಲೂ ಎಲ್ಲೋ ಒಂದು ಕಡೆ ಭವಿಷ್ಯತ್ತಿನಲ್ಲಿ ಎದುರಾಗುವ ಅನಾಹುತಗಳು ಕಣ್ಣಿಗೆ ಕಟ್ಟಿ ಭಯ ಮೂಡಿಸುತ್ತವೆ.

'ನಾಗರಿಕತೆಗಳ ವಿಳಿತದ ಬೃಹತ್ ಸಂಕಥನದ ಒಂದು ಬಿಂದುವಿನ ಮೇಲೆ ಬೆರಳಿಟ್ಟು ಬರೆದ ಆಧುನಿಕ ಮಾನವನ ಇಹ-ಪರಗಳ ತೊಳಲಾಟದ ವಿಹ್ವಲ ಹುಟ್ಟಿಸುವ ಕಾದಂಬರಿ ಈ 'ಬಯಲು-ಬಸಿರು'' ಎಂದು ಈ ಕೃತಿಯ ಕುರಿತು ಸ್ನೇಹಿತ ಜಿ.ಪಿ. ಹರೀಶ್ ಒಂದೆಡೆ ಹೇಳಿರುವುದು ಕಾದಂಬರಿಯ ಪರಿಪೂರ್ಣ ಭಾವಾರ್ಥದಂತೆ ಸಮರ್ಪಕವಾಗಿದೆ.

ಮನುಷ್ಯನಿಗೆ ಈ ಸೃಷ್ಟಿಯ ಜತೆ ಸಹಬಾಳ್ವೆ ಸಾಧ್ಯವಾಗುತ್ತಿಲ್ಲ. ಆದ್ದರಿಂದ ಈ ಎಲ್ಲ ಯಾತನೆಗಳು ಮಾನವ ನಿರ್ಮಿತ. ಇಲ್ಲಿಯ ಲೌಕಿಕ ಮತ್ತು ಅಲೌಕಿಕ ಭಾವಗಳು ವ್ಯಕ್ತಿಯೊಬ್ಬನ ಬದುಕಿನ ಮೇಲೆ ಏಕಕಾಲಕ್ಕೆ ವಿಸ್ತರಿಸುತ್ತಾ ಹೋಗುವ ಖುಷಿ ಮತ್ತು ನೋವು ಈ ಬಯಲು ಬಸಿರಿನ ನಿಗೂಢತೆಯಾಗಿದೆ.

ಕಾದಂಬರಿಯ ಕೊನೆಯಲ್ಲಿ ಬರುವ, ಆಧುನಿಕ ವಿಜ್ಞಾನದಿಂದ ತಯಾರಾದ ವಿಶೇಷ ಬಾಂಬು, ಅನಿಕೇತಾನಂದನನ್ನು ಚಿಂತೆಗೀಡುಮಾಡತೊಡಗುತ್ತದೆ. ಮೂಲ ತಳಹದಿಯಲ್ಲಿ ಸ್ಪಷ್ಟವಾದ ಬೆಳಕಿಗಾಗಿ ಹಂಬಲಿಸುತ್ತಿರುವ ಬಗ್ಗೆ ಅವನಲ್ಲಿ ಆತಂಕ ಮೂಡಲಾರಂಭಿಸುತ್ತದೆ.

ಅನಿಕೇತಾನಂದನನ್ನು ಸುತ್ತುವರಿದ ವಿಜ್ಞಾನಿಗಳು 'The cradle is safe' ತೊಟ್ಟಿಲು ಸುರಕ್ಷಿತವಾಗಿದೆ ಎಂದು ಹರ್ಷೋದ್ಗಾರ ಮಾಡಿದಾಗ, ಎಲ್ಲ ರಾಷ್ಟ್ರಗಳೂ ಕೈಯಲ್ಲಿ ಬೆಂಕಿಪೊಟ್ಟಣ ಹಿಡಿದು ಪೆಟ್ರೋಲಿನ ಸಮುದ್ರದಲ್ಲಿ ನಿಂತು ಸಂತೋಷ ಹಂಚಿಕೊಳ್ಳುತ್ತಿರುವಂತೆ ಅವನಿಗನ್ನಿಸುತ್ತದೆ.

ತೊಟ್ಟಿಲು ಮಾತ್ರ ಸುರಕ್ಷಿತವಾಗಿದೆ ನಿಜ. ಆದರೆ ಇವರ್‍ಯಾರಿಗೂ ಅದೇ ತೊಟ್ಟಿಲಲ್ಲಿ ಮುಗ್ಧವಾಗಿ ಮಲಗಿ ಆಡುತ್ತಿರುವ ಮಗುವಿನ ಕುರಿತು ಕಾಳಜಿ ಇಲ್ಲ. ಅದು ಅಪಾಯದಲ್ಲಿದೆ. ಅದು ತನಗರಿವಿಲ್ಲದೇ ಯಾವ ವೇಳೆಯಲ್ಲಿ ಬೆಂಕಿ ಕಡ್ಡಿ ಗೀರಿಕೊಂಡು ಅನಾಹುತ ಆಹ್ವಾನಿಸಿಕೊಳ್ಳುತ್ತದೋ ಎಂದು ಅನಿಕೇತಾನಂದನಿಗೆ ತೀವ್ರ ವೇದನೆಯಾಗುತ್ತದೆ.

ಪೆಟ್ರೋಲ್ ಸಮುದ್ರದಲ್ಲಿ ನಿಂತು ಮಗುವಿನ ಕೈಯಿಂದ ಬೆಂಕಿಪೊಟ್ಟಣವನ್ನು ಉಪಾಯವಾಗಿ ಬಿಡಿಸಿಕೊಳ್ಳುವುದು ಹೇಗೆ? ಎಂಬುದು ಮನುಷ್ಯ ಚರಿತ್ರೆ ಇನ್ನೂ ಕಲಿಯಬೇಕಾಗಿರುವ ಪಾಠವಾಗಿದೆ. ಇದು ದೇವರಗೆಣ್ಣೂರರು ಈ ಬರವಣಿಗೆಯ ಮೂಲಕ ಹೇಳಬಯಸಿರುವ ಪ್ರಮುಖ ಅಂಶ ಅಂತನ್ನಿಸುವುದು.

ಈ ನೂರಾಹನ್ನೊಂದು ಪುಟಗಳ 'ಬಯಲು-ಬಸಿರು' ಕಾದಂಬರಿಯಲ್ಲಿ ಕ್ಷಣಕ್ಷಣಕ್ಕೂ ಆಳವಾಗಿ ಪಸರಿಸಿಕೊಂಡದ್ದು ಇಂಥದೇ ಮನುಕುಲದ ಇತಿಹಾಸವೆಂದು ತಿಳಿದಾಗ ಮೈ ಝುಮ್ಮೆನ್ನಿಸುತ್ತದೆ.

ಹೀಗೆ ಪರಿಶುದ್ಧ ಓದುಗರಾಗಿ ಕೃತಿಯ ರಸಾಸ್ವಾದವನ್ನು ಉತ್ಕಟವಾಗಿ ಅನುಭವಿಸಿದರೆ, ಈ ಕಾದಂಬರಿಯ ರಚನೆಯಲ್ಲಿರುವ ವಿಚಿತ್ರ ಸಂಕೀರ್ಣತೆಯ ಯಾವುದೇ ಸಣ್ಣ-ಪುಟ್ಟ ದೋಷಗಳು ಓದುಗರನ್ನು ತಟ್ಟಲಾರವೇನೋ.

---

ನಂ. ೯೭, ನಾಗಸುಧೆ, ಕಾಳಿದಾಸ ನಗರ,
ವಿದ್ಯಾನಗರ, ವಿಸ್ತರಣ, ಹುಬ್ಬಳ್ಳಿ - ೫೮೦ ೨೦

# ಕುಸುಮಾಕರ ದೇವರಗೆಣ್ಣೂರರ ಕಾದಂಬರಿಗಳು




✦ ವಿಕ್ರಮ ವಿಸಾಜಿ

**ಕು**ಸುಮಾಕರ ದೇವರಗೆಣ್ಣೂರರು ಇಲ್ಲಿಯವರೆಗೆ ಬರೆದದ್ದು ಒಟ್ಟು ಐದು ಕಾದಂಬರಿ. ಮುಗಿಯದ ಕತೆ (೧೯೬೫), ನಾಲ್ಕನೆಯ ಆಯಾಮ (೧೯೬೬), ನಿರಿಂದ್ರಿಯ (೧೯೯೨), ಪರಿಘ(), ಬಯಲು ಬಸಿರು (೨೦೦೫). ನವ್ಯದ ಕಾಲಾವಧಿಯಿಂದ ದಲಿತ-ಬಂಡಾಯೋತ್ತರ ಕಾಲವಧಿಯವರೆಗೆ ಇವು ರಚನೆಗೊಂಡು ಪ್ರಕಟವಾಗಿವೆ. ಈ ಕಾದಂಬರಿಗಳು ಗಾತ್ರದಲ್ಲಿ ಚಿಕ್ಕವು. ಕತೆಯ ವ್ಯಾಪ್ತಿ ಕೂಡ ಚಿಕ್ಕದೆ; ಸರಾಸರಿ ಒಬ್ಬ ಮನುಷ್ಯನ ಜೀವನಾವಧಿ. ಈ ಚಿಕ್ಕ ಕಾಲಾವಧಿಯಲ್ಲಿ ನಡೆಯುವ ಬದುಕಿನ ಶೋಧನೆ ವಿಷಾದ ವ್ಯಂಗ್ಯ ಮೂಲದ್ದು. ಈ ವ್ಯಂಗ್ಯ ಉಡಾಫೆಯದ್ದಲ್ಲ ಅಥವಾ ದುರಂತದ್ದೂ ಅಲ್ಲ. ಮನುಷ್ಯನ ಬದುಕಿನ ಮಿತಿ ಮತ್ತು ಸಾಧ್ಯತೆಗಳ ಕರ್ಷಣದಲ್ಲಿ ದಕ್ಕಿದ್ದು. ವ್ಯಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಮಾನಸಿಕ ತುಮುಲಗಳನ್ನು ಅನ್ವೇಷಿಸುವ, ಆ ಮೂಲಕ ಬದುಕಿನ ಹಲವು ಮಗ್ಗುಲುಗಳನ್ನು ಸಹಜವಾಗಿ, ಯಾವ ವಾದದ ಬೆಂಬಲವಿಲ್ಲದೆ, ನಿರುದ್ವಿಗ್ನವಾಗಿ ಅರಿಯುವ ಕ್ರಮವನ್ನು ಕುಸುಮಾಕರರು ಅನುಸರಿಸಿದ್ದಾರೆ. ಹೀಗಾಗಿ ನವ್ಯದ ಕೆಲವು ಕಾದಂಬರಿಗಳಲ್ಲಿ ಕಂಡುಬರುವ ತಬ್ಬಲಿತನದ ಮತ್ತು ಅಸ್ತಿತ್ವದ ತುಡುಕಾಟ ಇಲ್ಲಿನ ಪ್ರಧಾನ ಸಮಸ್ಯೆಯಲ್ಲ. ಅತ್ಯಂತ ನಿರ್ಮಮವಾಗಿ ಬದುಕನ್ನು ಶೋಧಿಸುವುದು ಇವುಗಳ ಗುರಿ.

ಕುಸುಮಾಕರರ ಕಾದಂಬರಿಗಳ ಬಹುಪಾಲು ಅರ್ಥ ಅಡಗಿರುವುದು ಅಲ್ಲಿನ ಕನಸುಗಳಲ್ಲಿ. ಇವು ಕಥಾನಾಯಕರ ಅತೃಪ್ತಿಯ ಮೊತ್ತಗಳೂ ಹೌದು. ಮತ್ತು ಅಡುಗುತಾಣಗಳೂ ಹೌದು. 'ನಾಲ್ಕನೆಯ ಆಯಾಮ' ಕಾದಂಬರಿಯ ನಾಯಕನಿಗೆ ಮತ್ತೆ ಮತ್ತೆ ಒಂದು ಕನಸು ಬೀಳುತ್ತಿದೆ; ಅಪಾರವಾದ ಜಲರಾಶಿ. ತಾನು ಮಧ್ಯದಲ್ಲಿದ್ದಾನೆ. ಯಾವ ಆಸರೆಯೂ ಇಲ್ಲ. ಕಡಲಿನಂತಹ ಜಲರಾಶಿಯಲ್ಲಿ ಇನ್ನೊಂದು ಹಕ್ಕಿ ಕೂಡ ಕಣ್ಣಿಗೆ ಕಾಣುವಂತಿಲ್ಲ. ತಾನೊಬ್ಬನೆ ಈಸುತ್ತಿದ್ದಾನೆ ರಭಸದಿಂದ

ಈಸುತ್ತಿದ್ದಾನೆ. ಭೋರ್ಗರೆಯುವ ಪ್ರವಾಹದ ಗರ್ಜನೆ. ಬಿರುಗಾಳಿಯ ಹೊಡೆತ ಇವುಗಳನ್ನು ಮೀರಿಸಿ ಅವನು ಈಸುವ ಸುದ್ದಿ ಕೇಳಿಬರುತ್ತಿದೆ. ಅವನ ವೇಗವೂ ಸಾಕಷ್ಟಿದೆ. ಅವನಿಗೆ ದಣಿವು ಎನಿಸುತ್ತಿಲ್ಲ. ಆದರೆ ಒಂದು ಬಗೆಯ ಅವ್ಯಕ್ತ ಭೀತಿಯಿದೆ. (ಪು. ೧೪). ಈ ಕನಸು ಅವರ ಎಲ್ಲ ಕಾದಂಬರಿಗಳ ಒಳ ಸ್ವರೂಪವನ್ನು ಸೂಚಿಸುವ ಸಂಕೇತದಂತಿದೆ. ಅಂದರೆ, ಚಡಪಡಿಕೆ – ಎದುರಿಸುವ ಉತ್ಸಾಹ– ಸಿಗದ ಗುರಿ– ಮತ್ತದೇ ಅತೃಪ್ತಿ. ಇಂಥದ್ದೊಂದು ಭಿತ್ತಿ ನಾಯಕರ ಸ್ವಭಾವದಲ್ಲಿ ಮತ್ತು ಕಾದಂಬರಿಯ ಒಳಸ್ವರೂಪದಲ್ಲಿ ಕಂಡುಬರುತ್ತದೆ. ಈ ಬದುಕು ವಿಚಿತ್ರವಾದುವೂ ಹೌದು ಮತ್ತು ಬದುಕಲು ಯೋಗ್ಯವಾದುದೂ ಹೌದು ಎಂಬ ಅರಿವು ಕಥಾ ನಾಯಕರಿಗಿದೆ. ಇಂಥ ಬದುಕಿನೊಳಗೆ ಸಾಫಲ್ಯದ ಹುಡುಕಾಟಕ್ಕಾಗಿ ಅವರೆಲ್ಲ ಒದ್ದಾಡುತ್ತಿದ್ದಾರೆ. ಬದುಕಿನ ವಿಚಿತ್ರ ತಿರುವುಗಳನ್ನು ಹಾಯುತ್ತ, ಕಲಿಯುತ್ತ, ಗೊಂದಲಗೊಳ್ಳುತ್ತ ಸಾಗಿದ್ದಾರೆ.

ನಾರ್ಮನ್ (ಬಯಲು-ಬಸಿರು) ಹೊರತುಪಡಿಸಿ ಉಳಿದ ಕಾದಂಬರಿಗಳ ನಾಯಕರೆಲ್ಲ ಸಂಸಾರದಲ್ಲಿ ಆಸಕ್ತರಾದವರೆ. ಆದರೆ ಬದುಕಿನಲ್ಲಿ ಸಾಫಲ್ಯ ಕಾಣದೆ ತೊಳಲಾಡುತ್ತಿರುವರು. ಸಂಸಾರಿಗಳಿರಲಿ, ಸನ್ಯಾಸಿಗಳಿರಲಿ, ಇಲ್ಲಿನ ನಾಯಕರ ತೊಳಲಾಟ ನಿಂತಿಲ್ಲ. ಒಮ್ಮೊಮ್ಮೆ ಸಕಾರಣವಾಗಿ ಇನ್ನೊಮ್ಮೆ ಅಗತ್ಯವಾಗಿ ತೊಳಲಾಟಕ್ಕೆ ಒಳಗಾಗುವ ಇವರನ್ನು ಗಮನಿಸಿದರೆ ಕುಸುಮಾಕರರು 'ಅಸಂಗತವಾದ'ದ ಹಲ್ಲು ಮತ್ತು ಉಗುರುಗಳನ್ನು ಕಿತ್ತಿ ತಮ್ಮ ಕಾದಂಬರಿಗಳ ಒಳ ಹಂದರವನ್ನು ನಿರ್ಮಿಸುತ್ತಿದ್ದಾರೆಯೆ? ಎಂಬ ಅನುಮಾನ ನನಗೆ ಬಂದುದ್ದುಂಟು. (ಕನ್ನಡದಲ್ಲಿ Absurd ಎಂಬುದಕ್ಕೆ ಅಸಂಗತವಾದವೆಂದು ಮೊದಲಿಗೆ ಹೆಸರು ಕೊಟ್ಟವರು ಕುಸುಮಾಕರರೆ!) ಇವೇನೆ ಇರಲಿ, ಈ ನಾಯಕರು ಅಪ್ಪಟ ಸಂವೇದನಾಶೀಲರು. ಮನಸ್ಸಿನ ಪದರು ಪದರುಗಳನ್ನು ಬಿಡಿಸಿ ನೋಡಿಕೊಳ್ಳಬಲ್ಲವರು. ಮಾಡಿದ ಪಾಪ ನೆನಪಿಸಿಕೊಂಡು ಅಪರಾಧೀಪ್ರಜ್ಞೆಗೆ ಈಡಾಗುವರು. ಕೆಲವೊಮ್ಮೆ ಮಾಡಬೇಕಾದವನ್ನು ಮಾಡಲಾರದೆ ನಿರಾಶೆಗೊಳ್ಳುವರು. ವಾಸ್ತವ ಇವರೊಳಗೆ ಅಸಹಾಯಕತೆ ಹುಟ್ಟಿಸಿದರೆ ಕನಸುಗಳು ಯಾತನೆಯುಂಟುಮಾಡಿವೆ. ಈ ನಾಯಕರಿಗೆ ಕ್ರಾಂತಿವೀರರಾಗುವ ಬಯಕೆಯಾಗಲಿ ಅಥವಾ ಎಲ್ಲವನ್ನೂ ಕೈಚೆಲ್ಲಿ ಕೂಡುವ ಹೇಡಿತನವಾಗಲಿ ಇಲ್ಲ. ನಡುಹರೆಯದವರಾದ ಇವರು ತೀವ್ರ ತುಮುಲಗಳಿಂದ ಕೂಡಿದವರು. ಈ ತುಮುಲಗಳನ್ನು ಅವರೇ ಸೃಷ್ಟಿಸಿಕೊಂಡಿದ್ದಾರೆ.

> ನನಗೆ ಬೆಳಕು ಬೇಕು. ನನಗೆ ದಾರಿಯನ್ನು ಯಾರೂ ತೋರಿಸುವವರಿಲ್ಲವೆ? ಈ ಬೆಂಕಿಯಿಂದ ನನ್ನನ್ನು ಯಾರೂ ಎತ್ತುವವರಿಲ್ಲವೆ?
>
> (ನಾಲ್ಕನೆಯ ಆಯಾಮ : ೧೩೬)
>
> ಏನು ಜಗತ್ತು ಇದು! ಇದರಿಂದ ದೂರ ಓಡಿಹೋಗಲೆ! ಮನೆಗೂ ಹೋಗಬಾರದು, ಇಲ್ಲಿಯೂ ಇರಬಾರದು. ಹಾಗಾದರೆ ಏನು ಮಾಡಬೇಕು!
>
> (ನಿರಿಂದ್ರಿಯ : ೨೪)
>
> ಇಷ್ಟು ದಿನಗಳವರೆಗೆ ಈ ಆಶ್ರಮವನ್ನು ಬೆಳೆಸುತ್ತಿದ್ದರೂ ನನ್ನ ಬಾಳಿನ ರಿಕ್ತತೆ ತುಂಬಿತೆ? ನಾನು ಭಾರತಕ್ಕೆ ಏನನ್ನು ಬಯಸಿ ಬಂದೆ? ನನಗೆ ಇಲ್ಲಿ ದೊರೆಯಿತೆ? ಹೆಸರು ಬದಲಿಸಿದೆ. ಬಟ್ಟೆ ಬದಲಿಸಿದೆ. ನಾನು ಬದಲಾದನೆ? ನಾನು ಬಯಸಿದುದು ನನಗೆ ಇಲ್ಲಿ ದೊರೆಯಿತೆ?...
>
> (ಬಯಲು ಬಸಿರು : ೮೩)

ಡಾ. ರಹಮತ್ ತರೀಕೆರೆಯವರು ಗುರುತಿಸಿದಂತೆ (ಮಯೂರ: ಏಪ್ರಿಲ್ ೨೦೦೫, ಪು.

೧೪-೨೦) 'ನಾಲ್ಕನೆಯ ಆಯಾಮದ' ನಾಯಕನೆ ರೋಳ್ಳಿಯಾಗಿ(ನಿರಿಂದ್ರಿಯ), ನಂತರ ನಾರ್ಮನ್(ಬಯಲು-ಬಸಿರು) ಆಗಿ ಮರುಹುಟ್ಟು ಪಡೆದಂತೆ ಈ ಕಾದಂಬರಿಗಳ ಮೂಲ ಸ್ರೋತ ಒಂದೇ ಆಗಿದೆ. ಅದು ತೀವ್ರ ತುಮುಲುಗಳಿಂದ ಕೂಡಿದ ಬದುಕಿನ ಸಾಫಲ್ಯದ ಹುಡುಕಾಟ.

ಇವರೆಲ್ಲ ಉತ್ಸಾಹಿಗಳು. ಆದರೆ ಅಂಜುಬುರುಕರು. ಚಂಚಲರು ಮತ್ತು ತಾವೇ ಸೃಷ್ಟಿಸಿಕೊಂಡ ದೌರ್ಬಲ್ಯ ಹಾಗೂ ಕೀಳರಿಮೆಯಿಂದ ಕಂಗಾಲಾದವರು. 'ತಾನು ಹೀಗಿಲ್ಲ', 'ನನ್ನ ತಂದೆ ತಾಯಿ ಸರಿಯಿಲ್ಲ', 'ಉಳಿದವರ ಹಾಗೆ ಸುಖವಾಗಿರಲು ತನಗೇಕೆ ಸಾಧ್ಯವಾಗುತ್ತಿಲ್ಲ' - ಹೀಗೆ ಪ್ರಶ್ನೆಗಳ ಗೋಜಲಿನಲ್ಲಿ ಸುಖಿಸುತ್ತಿದ್ದಾರೆ. ಈ ಪ್ರಶ್ನೆಗಳನ್ನು ಎದುರಿಸುವ ಸಾಮರ್ಥ್ಯ ಮಾತ್ರ ಇಲ್ಲ. ನೋಡಿ 'ನಾಲ್ಕನೆಯ ಆಯಾಮ'ದ ನಾಯಕ ಕ್ರಾಂತಿಯ ಮೊದಲ ಹೆಜ್ಜೆಯಾಗಿ ಸಿಗರೇಟು ಸೇದಬೇಕೆಂದು ನಿರ್ಧರಿಸುತ್ತಾನೆ. ಕೊನೆಗೆ ಸಿಗರೇಟಿನ ದಾಸನಾಗಿದ್ದಾನೆ. ಜೀವನದಲ್ಲಿ ಏನನ್ನಾದರೂ ಸಾಧಿಸಬೇಕೆಂಬ ಹಸಿವು ಇಲ್ಲಿನ ನಾಯಕರಿಗಿದೆ. ಆದರೆ ಅದು ಬರೀ ಆಸೆಯಾಗಿ ಉಳಿದಿದೆ. ಹಸಿವನ್ನು ನೀಗಿಸಿಕೊಳ್ಳಲು ಮಾಡಬೇಕಾದ ತಯಾರಿ ಬಗ್ಗೆ ದೃಢನಿಲುವು ತಾಳುವಷ್ಟು ಸ್ಥಿರ ಮನಸ್ಕರಲ್ಲ. ಸಾಧನೆಯ ಹಸಿವು - ಪ್ರಯತ್ನದಲ್ಲಿ ನಿರಾಸಕ್ತಿ ಇವುಗಳ ನಡುವಿನ ಕಂದರ ಅವರೊಳಗೆ ಮುಖ್ಯವಾದ ಬಿಕ್ಕಟ್ಟನ್ನು ಸೃಷ್ಟಿಸಿದೆ. ಹಾಗಂತ ಸಂಪೂರ್ಣ ಪಾಪರ್ ಆಗುವ ಭೋಳೆತನದವರೂ ಅಲ್ಲ. ದೇಶಪಾಂಡೆ (ಮುಗಿಯದ ಕತೆ) ಏನೆಲ್ಲ ಅಪಮಾನಗಳನ್ನು ಸಹಿಸಿ ಇಂಗ್ಲಿಷ್ ಕಲಿತು ಪ್ರಭಾವಶಾಲಿ ಮಾತುಗಾರನಾಗಿದ್ದಾನೆ. 'ನಾಲ್ಕನೆಯ ಆಯಾಮ'ದ ನಾಯಕ ನೂರಾರು ಅವಘಡಗಳಿಗೆ ಒಳಗಾಗಿ ಕೊನೆಗೆ ಚಹಾ ಕಂಪನಿಯೊಂದರಲ್ಲಿ ಏಜಂಟನಾಗಿ ಸಮಾಜದ ಪ್ರತಿಷ್ಠಿತ ಜನರೊಂದಿಗೆ ಸ್ನೇಹ ಸಂಪಾದಿಸಿದ್ದಾನೆ. ರೋಳ್ಳಿ(ನಿರಿಂದ್ರಿಯ) ಸಾಮಾನ್ಯ ಹುದ್ದೆಯಿಂದ ಅಧಿಕಾರಿಯ ಹುದ್ದೆಗೇರಿದ್ದಾನೆ. ನಾರ್ಮನ್ (ಬಯಲು-ಬಸಿರು) ಕೂಡ ತನಗರಿವಿಲ್ಲದೆಯೇ ಆಕರ್ಷಕ ಗುರುವಾಗಿ ಸ್ಥಾಪಿತಗೊಂಡಿದ್ದಾನೆ. ಏನೇ ಅಸ್ತಿತ್ವ ಗಳಿಸಿಕೊಂಡರೂ ಅವರ ದ್ವಂದ್ವಗಳು ಕಡಿಮೆಯಾಗಿಲ್ಲ. ತಮ್ಮ ತಪ್ಪಿಗೆ ತಾವೇ ಕೊಟ್ಟುಕೊಂಡ ತಾರ್ಕಿಕ ಸಮರ್ಥನೆಗಳು ಅವರ ಒದ್ದಾಟವನ್ನು ನಿಲ್ಲಿಸಿಲ್ಲ. ಹೀಗೆ ವಿಚಿತ್ರ ತುಮುಲಗಳು, ಕನಸುಗಳು, ಆಸೆಗಳು, ಹತಾಶೆಗಳು ಪರಸ್ಪರ ಡಿಕ್ಕಿ ಹೊಡೆಯುತ್ತ ಅವರ ವ್ಯಕ್ತಿತ್ವ ರೂಪಿಸಿವೆ. ಆಲೋಚಿಸಿದಷ್ಟು ಅವರೊಳಗಿನ ಗೊಂದಲಗಳೆ ಹೆಚ್ಚಾಗಿವೆ. ಅನ್ಯರಿಂದ, ಸಮಾಜದಿಂದ ಅತಿಯಾದ ಸಹಾನುಭೂತಿ, ಅನುಕಂಪಕ್ಕೆ ಹಾತೊರೆದು ಅದು ಲಭ್ಯವಾಗದೆ ಇದ್ದಾಗ ಹಳಿಯುತ್ತಾರೆ. ತನ್ನ ಅವಮಾನ, ಅತೃಪ್ತಿಯನ್ನು ಪ್ರತಿಭಟಿಸಲೂ ಆಗದ, ಎದುರಿಸಲೂ ಆಗದ ಸ್ಥಿತಿಯಲ್ಲಿದ್ದಾರೆ.

ಅವರ 'ಕಾಮ'ದ ಉತ್ಸಾಹದಲ್ಲೂ ಈ ಗೊಂದಲ ಕಾಣಬಹುದು. ಬತ್ತಲೆ ಚಿತ್ರಗಳನ್ನು ನೋಡಿ ಸುಖಿಸುವ, ಸಹಪಾಠಿ ಹುಡುಗಿಯನ್ನು ನೆನಪಿಸಿಕೊಂಡು ಖುಷಿಗೊಳ್ಳುವ, ವಿದ್ಯಾರ್ಥಿನಿಯೊಬ್ಬಳ ಬೆತ್ತಲೆ ಕಾಲುಗಳನ್ನು ಸ್ಪರ್ಶಿಸಿ ರೋಮಾಂಚನಗೊಳ್ಳುವ ಮನೋಭಾವದವರು. ನಿಜವಾಗಿಯೂ ಅವರು ಎದುರಾದರೆ ಗಲಿಬಿಲಿಗೊಳ್ಳುತ್ತಾರೆ. ನಾಲ್ಕನೆಯ ಆಯಾಮದ ನಾಯಕ ಮಾತ್ರ ಒಂದು ಸಲ ಇಷ್ಟಪಿದ್ದೋ ಇಲ್ಲದೆಯೋ ವೇಶ್ಯೆಯೊಬ್ಬಳ ಜೊತೆ ಮಲಗಿ ಬಂದಿದ್ದಾನೆ. ಸರಸ್ವತಿ (ಮುಗಿಯದ ಕತೆ) ದೇಸಾಯಿಯ ಬಗೆಗೆ ಪ್ರೀತಿ ಬೆಳೆಸಿಕೊಂಡರೂ ಅದು ಆಲಿಂಗನದ ರೇಖೆ ದಾಟಿ ಹೋಗುವುದಿಲ್ಲ. ವೃಂದಾಳ (ನಿರಿಂದ್ರಿಯ) ಪ್ರೀತಿಯ ಹಳಹಳಿಕೆ ಕೂಡ ಇಂಥ ನೆನಪುಗಳನ್ನೆ ಆಶ್ರಯಿಸಿದೆ. ರೋಳ್ಳಿ (ನಿರಿಂದ್ರಿಯ) ನಾರ್ಮನ್ (ಬಯಲು-ಬಸಿರು) ಇದರಿಂದ

ತುಂಬ ದೂರ. ಅವರ ಕಾಮ ದಿವ್ಯಾನುಭವ ಕೊಡುವ ಕ್ರಿಯೆಯಾಗಲಿ ಅಥವಾ ಬದುಕಿನ ಚಲನೆಯನ್ನೇ ಪರಿವರ್ತಿಸುವ ಕ್ರಿಯೆಯಾಗಲಿ ಅಲ್ಲ. ಅದು ಸಹಜವಾದ ಮತ್ತು ಇನ್ನೊಂದು ಅರ್ಥದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾದ ಕ್ರಿಯೆ. ಈ ಆಸಕ್ತಿ-ನಿರಾಸಕ್ತಿಯ ತರ್ಕಗಳಾಚೆ ಬೆಳೆದು ನಿಲ್ಲುವ ಅವರ ಜೀವನದ ಗೊಂದಲಗಳನ್ನು ಕುಸುಮಾಕರರು ಅಪೂರ್ವ ತೇಜಸ್ಸಿನ ಶೈಲಿಯಲ್ಲಿ ಕಟ್ಟಿದ್ದಾರೆ. ಹೀಗಾಗಿಯೆ ಕುಸುಮಾಕರರು ತಂತ್ರದ ದೃಷ್ಟಿಯಿಂದ ನವ್ಯ ಲೇಖಕರ ಹೊರತು ಬದುಕಿನ ಶೋಧನೆಯ ದೃಷ್ಟಿಯಿಂದ ಅಲ್ಲ.

ತಮ್ಮ ದೌರ್ಬಲ್ಯಗಳಿಂದ ತಪ್ಪಿಸಿಕೊಳ್ಳಲು ಕಥಾ ನಾಯಕರಿಗಿರುವ ಸುಲಭ ದಾರಿಯೆಂದರೆ ತಮ್ಮ ಅಸಹಾಯಕತೆಗೆ ಇನ್ನೊಬ್ಬರನ್ನು ಹೊಣೆಯಾಗಿಸುವುದು. ಅವರಲ್ಲೂ ತಂದೆ-ತಾಯಿಯನ್ನು ಹೊಣೆಯಾಗಿಸಿದ ಉದಾಹರಣೆಗಳೆ ಹೆಚ್ಚು. ಇವರು ತಮ್ಮ ವೈಫಲ್ಯಕ್ಕೆ ತಂದೆ-ತಾಯಿ, ಸಮಾಜದ ಮೇಲೆ ಬೊಟ್ಟು ಮಾಡಿ ತೋರಿಸುತ್ತಿದ್ದರೆ, ಕಾದಂಬರಿಯ ಒಟ್ಟು ಧ್ವನಿ ಆ ನಾಯಕರ ಸ್ವಭಾವದ ಕಡೆಗೇನೆ ಬೊಟ್ಟು ಮಾಡಿ ತೋರಿಸುತ್ತಿದೆ. ಮನುಷ್ಯನ ಶ್ರೇಯ ಮತ್ತು ಪ್ರೇಯಕ್ಕೆ ಸಮಾಜಕ್ಕಿಂತ ಅವನ ಮನಃಸ್ಥಿತಿಯೇ ಮುಖ್ಯ ಕಾರಣವೆಂಬ ನಂಬಿಕೆ ಕಾದಂಬರಿಯಿಂದ ಹೊರಟಿದೆ. ಹೀಗಾಗಿ ಸಮಾಜದ ಕುರಿತು ಅಭಿಪ್ರಾಯಗಳನ್ನು ದಾಖಲಿಸುವಾಗ ಆ ಅಭಿಪ್ರಾಯಕ್ಕಿಂತ ಅಭಿಪ್ರಾಯವನ್ನು ವ್ಯಕ್ತಪಡಿಸಿದ ಮನಃಸ್ಥಿತಿಯತ್ತಲೇ ಕಾದಂಬರಿಕಾರರ ಗಮನವಿದೆ.

ಬದುಕನ್ನು ನಿರಂತರವಾಗಿ ಶೋಧದ ಒಂದು ಪರಿಧಿಯಾಗಿ ಪರಿಭಾವಿಸುವ ಕ್ರಮ ಇಲ್ಲಿದೆಯೆಂದು ಈ ಮೊದಲೆ ಹೇಳಿದೆನಷ್ಟೆ. ಇಂಥ ಪರಿಧಿಯಲ್ಲಿ ಕಥಾ ನಾಯಕರು ಮಧ್ಯಬಿಂದುಗಳು. ಈ ಬಿಂದುಗಳು ಸ್ಥಿರವಾದವುಗಳಲ್ಲ. ತಮ್ಮ ಅತೃಪ್ತಿ, ಅಸಹಾಯಕತೆಯನ್ನು ಬದುಕಿನ ವಿವಿಧ ಕೋನಗಳಿಗೆ ತಾಕಿಸುತ್ತ ಚಲಿಸುವ ಬಿಂದುಗಳಿವು. ಇವುಗಳ ಚಲನೆ ನಿಜವಾದ ಅರ್ಥದಲ್ಲಿ ಚಲನೆಯಲ್ಲ. ಮೊದಲಲ್ಲಿ ಯಾವ ಸ್ಥಿತಿಯಲ್ಲಿವೆಯೊ ಕೊನೆಯಲ್ಲೂ ಅದೇ ಸ್ಥಿತಿಯಲ್ಲಿವೆ. ಮಾನಸಿಕವಾಗಿ ಬೆಳೆಯಲು ಅವರಿಗೆ ಸಾಧ್ಯವಾಗುತ್ತಿಲ್ಲ. ಈ ಮಾನಸಿಕ ತೊಳಲಾಟಕ್ಕೆ ಆಸ್ಪದ ಮಾಡಿಕೊಟ್ಟಿದೆ. ದೇಶಪಾಂಡೆ (ಮುಗಿಯದ ಕತೆ) ಕೀಳರಿಮೆಯಿಂದ ನರಳಿ ವಿದೇಶಕ್ಕೆ ಹೋಗಿ ಬಂದು ಊರೊಳಗೆ ಗೌರವ ಹೆಚ್ಚಿಸಿಕೊಂಡರೂ ಕೊನೆಗೆ ಹೆಂಡತಿಯ ನಡತೆಯಿಂದ ತತ್ತರಿಸಿ ಮತ್ತದೇ ಅತೃಪ್ತಿಯ, ಆಘಾತದ ಗೂಡಿನೊಳಗೆ ಸೇರಿಕೊಂಡಿದ್ದಾನೆ. ಒಂದು ಅತೃಪ್ತಿಯಿಂದ ಬಿಡುಗಡೆಗೊಂಡು ಇನ್ನೊಂದು ಅತೃಪ್ತಿಗೆ ಜಾರಿದ್ದಾನೆ. ಇದು ಉಳಿದ ಕಾದಂಬರಿಗಳ ನಾಯಕರ ಮಟ್ಟಿಗೂ ನಿಜ. ಅವರು ಬಿಡಿಸಿಕೊಳ್ಳಲು ಯತ್ನಿಸಿದಷ್ಟೂ ಬಂಧನಕ್ಕೆ ಒಳಗಾಗುತ್ತಿದ್ದಾರೆ. ಅಂದರೆ, ಈ ಬದುಕು ವಿಚಿತ್ರವಾದುದು. ಮನುಷ್ಯನ ನೋವಿಗೆ ಇಲ್ಲಿ ಪರಿಹಾರವಿಲ್ಲ. ಅವನ ವಿಹ್ವಲತೆಗೆ ಸಾಂತ್ವನವಿಲ್ಲ. ನೋಯುವುದು ಮಾತ್ರ ನಿರಂತರ. ನೋವಿನಿಂದ ತಪ್ಪಿಸಿಕೊಂಡರೂ ತಲುಪುವುದು ಮಾತ್ರ ಇನ್ನೊಂದು ನೋವಿಗೇನೆ – ಎಂಬ ನಂಬಿಕೆ ಕಾದಂಬರಿಯ ವಾತಾವರಣವನ್ನು ರೂಪಿಸಿದಂತಿದೆ. 'ನಾಲ್ಕನೆಯ ಆಯಾಮ'ದ ನಾಯಕ ಕೂಡ ಏನೇನೊ ಕನಸು ಕಂಡು ಎಲ್ಲ ವಿಫಲವಾಗಿ ಕೊನೆಗೆ ಆಸ್ಪತ್ರೆಯಲ್ಲಿ ಅಪರಾಧೀಭಾವದಿಂದ ತೊಳಲಾಡುತ್ತಾನೆ. ರೊಳ್ಳಿ (ನಿರಿಂದ್ರಿಯ) ಸಹೋದರರು, ಹೆಂಡತಿ, ಮಕ್ಕಳು, ಯಾರೊಡನೆಯೂ ಸರಿಯಾಗಿ ಸಂಬಂಧ ಸ್ಥಾಪಿಸಿಕೊಳ್ಳಲು ಸಾಧ್ಯವಾಗದೆ ಚಡಪಡಿಸುತ್ತಾನೆ. ಕೊನೆಯಲ್ಲಿ ಹೆಂಡತಿಯ ಜೊತೆಗಿನ ಸಖ್ಯದ ಮಹತ್ವ ಅರಿವಾದಾಗ ಆತ ಬದುಕಿನ ಬಹುಭಾಗವನ್ನು ಮುಗಿಸಿದ್ದಾನೆ. ನಾರ್ಮನ್ (ಬಯಲು-ಬಸಿರು) ಆಧ್ಯಾತ್ಮವನ್ನು ಅರ್ಥೈಸಿಕೊಳ್ಳಲು ಭಾರತಕ್ಕೆ ಬಂದ. ಆದರೆ ಅವನಿಗರಿವಿಲ್ಲದಂತೆ ಅವನ ಸುತ್ತ ಬೆಳೆಯುತ್ತಿರುವ ಹುಸಿ ಪ್ರಭಾವಳಿ ಕಂಡು ಬೆಚ್ಚಿಹೋಗಿದ್ದಾನೆ. ಇಲ್ಲಿನ ನಾಯಕರಿಗೆ

ಸಮಾಧಾನವಿಲ್ಲ. ನೆಮ್ಮದಿಯ ಸಾಧ್ಯತೆಗಳು ಕೂಡ ಮೊಟಕುಗೊಂಡಿವೆ. ನಾಯಕರಷ್ಟೇ ಅಲ್ಲ ಉಳಿದ ಬಹುತೇಕ ಪಾತ್ರಗಳು ಕೂಡ ನೆಮ್ಮದಿಯನ್ನು ಕಳೆದುಕೊಂಡವರೆ. ಹಾಗಾದರೆ ಬದುಕಿನಲ್ಲಿ ನೆಮ್ಮದಿಯ ಸಾಧ್ಯತೆಗಳೆ ಇಲ್ಲವಾಗಿರುವ ಸ್ಥಿತಿಯನ್ನು ಇದು ಹೇಳುತ್ತಿದೆಯೆ? ಹಾಗೇನೂ ಇಲ್ಲ. ಆದರೆ ಅತೃಪ್ತಿಯ ಭಾರವನ್ನು ಹೊರಲೇಬೇಕಾದ ಮನುಷ್ಯ ಮತ್ತು ವ್ಯವಸ್ಥೆಯ ಅನಿವಾರ್ಯ ಮನಃಸ್ಥಿತಿಯನ್ನಂತೂ ಸೂಚಿಸುತ್ತಿದೆ.

ಇದಕ್ಕೆ ಅಪವಾದವೆಂದರೆ ನಂದಾ ಮತ್ತು ಆಕೆಯ ಪತಿ (ನಿರಿಂದ್ರಿಯ) ಮಾತ್ರ. ಇವರು ಸಾಮಾಜಿಕ ಚಟುವಟಿಕೆಗಳಲ್ಲಿ ಪಾಲ್ಗೊಂಡವರು. ಸಾಮಾಜಿಕ ಹೊಣೆಗಾರಿಕೆಯನ್ನು ಪ್ರಾಮಾಣಿಕವಾಗಿ ಕೈಲಾದಷ್ಟು ನಿಭಾಯಿಸಲು ಶ್ರಮಿಸಿದವರು. ಹಾಗೆ ನೋಡಿದರೆ, ಕುಸುಮಾಕರರ ಕಾದಂಬರಿಗಳ ಪಾತ್ರಗಳು ಸಾಮಾಜಿಕ ಪರಿಸರದಿಂದ ಆದಷ್ಟು ದೂರವಿರುವವರು. ತಮ್ಮದೇ ಬದುಕಿನ ಲೆಕ್ಕಾಚಾರ ಹಾಕುತ್ತ, ಕನಸಿನಲ್ಲಿ ಪೊರೆ ಬಿಡುವವರು. ನಂದಾ ಮತ್ತು ಆಕೆಯ ಗಂಡ ಮಾತ್ರ ಅವರ ಕಾದಂಬರಿಯ ಒಟ್ಟು ಮನಃಸ್ಥಿತಿಗೆ ವಿರುದ್ಧವಾಗಿ ಚಿತ್ರಿತಗೊಂಡಿದ್ದಾರೆ.

ಬದುಕಿನಲ್ಲಿ ಯಾವ 'ಅತೀ' (Extreme) ಹೋಗುವಷ್ಟು ಶಕ್ತಿಯಾಗಲಿ, ಹುಂಬುತನವಾಗಲಿ ಇಲ್ಲಿನ ಪಾತ್ರಗಳಿಗಿಲ್ಲ. ನಾರ್ಮನ್ (ಬಯಲು-ಬಸಿರು) ಕೂಡ ಅಷ್ಟೆ. ಒಂದು ಚೌಕಟ್ಟಿನ ಒಳಗೆಯೇ ಆಧ್ಯಾತ್ಮಿಕ ಹುಡುಕಾಟ ನಡೆಸಿದ್ದಾನೆ. ಅವನು ಆರಿಸಿಕೊಂಡ ಚೌಕಟ್ಟುಗಳು ಬಳಕೆಯಲ್ಲಿರುವ ಜನಪ್ರಿಯ ಮಾದರಿಗಳು. ಕೊನೆಗೆ ಭ್ರಮನಿರಸನಗೊಂಡು ಶಿಷ್ಯ ವಿನಯಾನಂದನಿಗೆ ಆಶ್ರಮದ ಮುಖ್ಯಸ್ಥನಾಗಲು ಹೇಳಿ ಗುರುಪೀಠ ತ್ಯಜಿಸುವ ನಿರ್ಧಾರ ಕೈಗೊಳ್ಳುತ್ತಾನೆ. ವಿಪರ್ಯಾಸವೆಂದರೆ ಅವನ ಆಧ್ಯಾತ್ಮಿಕ ಹುಡುಕಾಟದ ಉದ್ದೇಶ ಪ್ರಾಮಾಣಿಕವಾದದ್ದೆ ಆಗಿದ್ದರೂ ಸಾಗುತ್ತಿರುವ ದಾರಿ ಮಾತ್ರ ಭ್ರಷ್ಟಗೊಂಡಂಥದ್ದು. ಕುಸುಮಾಕರರು ಸಾಮಾಜಿಕ, ಸಾಂಸ್ಕೃತಿಕ ಎಳೆಗಳನ್ನು ಕಾದಂಬರಿಯ ಚೌಕಟ್ಟಿಗೆ ತರುವುದಿಲ್ಲ. ಹೀಗಾಗಿ ವ್ಯಕ್ತಿಗಳು ಬಿಡುಗಡೆಗೊಳ್ಳುವ ಅಭೀಪ್ಸೆ ಇನ್ನೂ ಜಟಿಲಗೊಂಡಿದೆ. ಅಂದರೆ, ಇವರು ಎಲ್ಲ ತರಹದ ಸಾಂಸ್ಕೃತಿಕ ಕವಚವನ್ನು ತೆಗೆದು ಆಲೋಚಿಸುತ್ತಿರುವವರು. ನಾರ್ಮನ್ (ಬಯಲು-ಬಸಿರು) ಆಧ್ಯಾತ್ಮದ ಮೂಲಕ ಬದುಕನ್ನು ಕಂಡುಕೊಳ್ಳಲು ಯತ್ನಿಸುತ್ತಿದ್ದರೂ ಅದು ಸಂಸ್ಕೃತಿಯಾಚೆಗಿನ ವ್ಯಾಪಾರೀಕರಣಗೊಂಡ ಆಧ್ಯಾತ್ಮ. ಹೀಗಾಗಿ ಕುವೆಂಪು, ಪೂರ್ಣಚಂದ್ರ ತೇಜಸ್ವಿ, ದೇವನೂರು ಮಹಾದೇವರ ಕಾದಂಬರಿಗಳ ವ್ಯಕ್ತಿಗಳಿರುವ ಸಾಧ್ಯತೆಗಳು ಕುಸುಮಾಕರರ ನಾಯಕರಿಗೆ ಇಲ್ಲವಾಗಿದೆ.

ಕಾದಂಬರಿಯಲ್ಲಿನ ಹೆಣ್ಣುಮಕ್ಕಳು ಈ ನಾಯಕರಿಗೆ ಹೋಲಿಸಿದರೆ ಹೆಚ್ಚು ಗೊಂದಲಗಳಿಲ್ಲದೆ, ಇರುವ ಬದುಕನ್ನೆ ನೆಚ್ಚಿಕೊಂಡು ಬಾಳುತ್ತಿದ್ದಾರೆ. ಸರಸ್ವತಿ (ಮುಗಿಯದ ಕತೆ), ವೃಂದಾ (ನಿರಿಂದ್ರಿಯ)ರಿಗೆ ತೊಳಲಾಟವಿದ್ದರೂ ಇದರಿಂದ ಹೊರಬರುವ ದಾರಿ ಅವರಿಗೆ ಗೊತ್ತಿದೆ. 'ನಾಲ್ಕನೆಯ ಆಯಾಮ'ದ ನಾಯಕನ ತಾಯಿ, ರೋಳ್ಳಿಯ ತಾಯಿ ಮೃದು ಸ್ವಭಾವದ ಕಕ್ಕುಲಾತಿಯ ಹೆಂಗಸರು. ಅವರ ತಾಳ್ಮೆ, ಕಾಳಜಿ ಕಾದಂಬರಿಯ ಉದ್ವಿಗ್ನ ವಾತಾವರಣದಲ್ಲಿನ ತಣ್ಣನೆಯ ಗಾಳಿ ಬೀಸಿದ ಅನುಭವ ನೀಡುತ್ತದೆ. ರೋಳ್ಳಿಯ ಮಾಮಿ ಸ್ವಲ್ಪ ಕಠೋರ ಸ್ವಭಾವದವಳು. ನಾರ್ಮನ್‌ನ ತಾಯಿ ವಿಚ್ಛೇದನಕ್ಕೆ ಒಳಗಾಗಿ ತನ್ನದೇ ಬದುಕು ರೂಪಿಸಿಕೊಂಡಿದ್ದಾಳೆ. ನಂದಾ (ನಿರಿಂದ್ರಿಯ) ಮನುಷ್ಯನ ಒಳಗಿನ ಬತ್ತಲಾರದ ಅಂತಃಕರಣಕ್ಕೆ ಸಾಕ್ಷಿಯಾಗಿದ್ದಾಳೆ. ಇವರಲ್ಲಿ ಬಹುತೇಕ ಹೆಣ್ಣುಮಕ್ಕಳು ಎಂಥ ಮಾನಸಿಕ ಗೊಂದಲಗಳಲ್ಲಿ ಬದುಕಿದರೂ ಮತ್ತೆ ಮನುಷ್ಯರಾಗಲು ಬೇಕಿರುವ ಚೈತನ್ಯವನ್ನು ಮರೆಯುವುದಿಲ್ಲ.

ಗಮನಿಸಬೇಕಾದ ಸಂಗತಿಯೆಂದರೆ ಕುಸುಮಾಕರರ ಕಾದಂಬರಿಗಳ ಈ ನಾಯಕರು ಜಾಣರೇ ಹೊರತು, ಜೀನಿಯಸ್‌ಗಳಲ್ಲ. ದೇಶಪಾಂಡೆ (ಮುಗಿಯದ ಕತೆ), ನಾಲ್ಕನೆಯ ಆಯಾಮದ ನಾಯಕ, ರೊಳ್ಳಿ (ನಿರಿಂದ್ರಿಯ) ಇವರೆಲ್ಲ ಜಾಣ್ಮೆಯನ್ನು ರೂಢಿಸಿಕೊಳ್ಳಲು ಹರಸಾಹಸ ಮಾಡುವ ಮತ್ತು ಅದರಲ್ಲಿ ಯಶಸ್ವಿಯೂ ಆಗುವ ಗುಣದವರು. ಅನಿಕೇತಾನಂದದಲ್ಲಿ ಜೀನಿಯಸ್‌ತನದ ಲಕ್ಷಣಗಳಿದ್ದರೂ ಅವು ಬೆಳೆದು ಸಾಫಲ್ಯ ಪಡೆದಿಲ್ಲ. ರೊಳ್ಳಿಯನ್ನು ಹೊರತುಪಡಿ ಉಳಿದವರು ಹೆಚ್ಚಾಗಿ ಪತ್ರಿಕೆ, ಪುಸ್ತಕ, ಸಿನಿಮಾ ಯಾವುದೋ ಹಾಡು, ವಿದೇಶ ಪ್ರವಾಸ – ಇಂಥವುಗಳಿಂದ ತಕ್ಷಣಕ್ಕೆ ಉತ್ತೇಜಿತರಾಗಿ ತಮ್ಮ ವ್ಯಕ್ತಿತ್ವ ರೂಪಿಸಿಕೊಂಡಿದ್ದಾರೆ. ಹೀಗಾಗಿ ಭದ್ರವಿಲ್ಲದ ಬುನಾದಿಯೊಂದು ಅವರ ವ್ಯಕ್ತಿತ್ವಕ್ಕೆ ಆಧಾರವಾಗಿದೆ. ದೇಶಪಾಂಡೆ ವಿದೇಶಕ್ಕೆ ಹೋಗಿಬಂದ ನಂತರ ಆಕರ್ಷಕ ವ್ಯಕ್ತಿತ್ವ ರೂಪಿಸಿಕೊಂಡಿದ್ದಾನೆ. ಆತ ಕೊಡುವ ಉದಾಹರಣೆ, ಬಳಸುವ ಮಾಹಿತಿಗಳು ತಕ್ಕಮಟ್ಟಿನ ಪರಿಣಾಮ ಉಂಟುಮಾಡಿವೆ. ನಾಲ್ಕನೆಯ ಆಯಾಮದ ನಾಯಕ ತನ್ನ ಜಾಣ್ಮೆಯಿಂದಲೇ ಶ್ರೀಮಂತ ಜನರೊಂದಿಗೆ ಸ್ನೇಹ ಸಂಪಾದಿಸಿದ್ದಾನೆ. ನೃತ್ಯ ಕಲಿಸುವ ನೆಪದಲ್ಲಿ ಆತ ಹುಡುಗಿಯೊಂದಿಗೆ ನಡೆಸುವ ಸಂಭಾಷಣೆ ನೋಡಿರಿ (ನಾಲ್ಕನೆಯ ಆಯಾಮ: ೧೫೩-೧೫೬). ರೊಳ್ಳಿ ಜಾಣ್ಮೆ ಪ್ರದರ್ಶಿಸುವ ಇಚ್ಛೆಯುಳ್ಳವನಲ್ಲವಾದರೂ ಜೀನಿಯಸ್‌ನಂತೂ ಅಲ್ಲ. ಅನಿಕೇತಾನಂದನ ಶಿಷ್ಯ ವಿನಯಾನಂದ (ಬಯಲು - ಬಸಿರು)ನ ವ್ಯವಹಾರಿಕ ನೈಪುಣ್ಯ ಗಮನಿಸಿ; ಆಧ್ಯಾತ್ಮಿಕ ಸಾಕಾರಕ್ಕಾಗಿ ನಡೆದ ಎಷ್ಟೆಲ್ಲ ಮಾಹಿತಿಯನ್ನು ಆತ ಕಲೆಹಾಕಿ ವಿವರಿಸಿದ್ದಾನೆ. ಜಾಣ್ಮೆಯನ್ನು ನಂಬಿ ಬಾಳಲು ಯತ್ನಿಸುವ ನಾಯಕರಿವರು. ಅವರ ಬದುಕಿನ ವಿಷಾದ ವ್ಯಂಗ್ಯಕ್ಕೆ ಈ ಜಾಣ್ಮೆಯ ಪ್ರದರ್ಶನ ಕೂಡ ಕಾರಣವಾಗಿದೆ.

ಬಹುತೇಕ ಪಾತ್ರಗಳು ಜೀವನದ ಪರೀಕ್ಷೆಗಳಲ್ಲಿ ಅಸಹಾಯಕಗೊಂಡರೂ ದುಷ್ಟರಾಗುವುದಿಲ್ಲ. ಮತ್ತು ಅನೈತಿಕತೆಗೆ ಇಳಿಯುವುದಿಲ್ಲ. (ವಿನಯಾನಂದನನ್ನು ಹೊರತುಪಡಿ). ಕಾದಂಬರಿಗಳು ಮನುಷ್ಯರ ಬಗ್ಗೆ ಮೂಲಭೂತವಾಗಿ ಒಂದು ದೊಡ್ಡ ಶ್ರದ್ಧೆ ಪ್ರಕಟಿಸಿವೆ. ಯಾರ ದುಷ್ಟತನವನ್ನು ಆಳವಾಗಿ ಕೆದಕಿ ತೋರುವುದಿಲ್ಲ. ಮನುಷ್ಯರಲ್ಲಿ ಕಂಡುಬರುವ ದುಷ್ಟತೆ ಕ್ಷಣಿಕವಾದದ್ದು ಮತ್ತು ಪರಿಸ್ಥಿತಿಯ ಅನಿವಾರ್ಯತೆಯಿಂದ ಮೂಡಿದ್ದು ಎಂಬ ಅರಿವಿನಲ್ಲಿ ಈ ಪಾತ್ರಗಳು ಮೈಪಡೆದಿವೆ. ಇಲ್ಲಿನ ಅಪ್ಪಂದಿರು ಹಟಮಾರಿಗಳಾದರೂ ಒಂದು ಹಂತದಲ್ಲಿ ಹಟವನ್ನು ಬಿಟ್ಟುಕೊಡಬಲ್ಲರು. ವೃಂದಾಳ (ನಿರಿಂದ್ರಿಯ) ಸೊಸೆ ಕಟಕಿ ಮಾತಾಡಿದರೂ ಅತ್ತೆಗೆ ಸೀರೆ ಕೊಡಲಾರದಷ್ಟು ಕಠೋರ ಮನಸ್ಸಿನವಳಲ್ಲ. ಯಾರೂ ಬದ್ಧದ್ವೇಷಿಗಳಾಗಿ ವರ್ತಿಸುವುದಿಲ್ಲ. ಸೇಡಿನ ವಿಷ ಕಾರುವುದಿಲ್ಲ. ಅಸಮಾಧಾನವಾದರೆ ವ್ಯಂಗ್ಯವಾಗಿ ಛೇಡಿಸಿಕೊಳ್ಳುತ್ತಾರಷ್ಟೆ. ಹಾಗೆ ಮಾಡಿದ ಮೇಲೆ ಅದಕ್ಕಾಗಿ ಪಶ್ಚಾತ್ತಾಪವೂ ಪಟ್ಟಿದ್ದಾರೆ. ರೊಳ್ಳಿ ಮತ್ತು ಆಕೆಯ ಮಗ (ನಿರಿಂದ್ರಿಯ) ಹೊಲ ಪಡೆಯಲು ಹಳ್ಳಿಗೆ ಬಂದಿದ್ದಾರೆ. ಪಾಲು ಕೇಳಿ ಚರ್ಚಿಸಿದ್ದಾರೆ. ಆದರೆ ಇವೆಲ್ಲ ರಗಳೆ ಬೇಡವೆಂದು ಮತ್ತೆ ಮುಂಬೈಗೆ ತೆರಳಿದ್ದಾರೆ. ಅವರಲ್ಲಿ ಮಾನವ ಸಹಜ ಆಸೆಗಳಿವೆ, ಆದರೆ ಹೇಗಾದರೂ ಮಾಡಿ ಪಡೆದೇ ತೀರಬೇಕೆಂಬ ದುಷ್ಟತೆ ಇಲ್ಲ. ಅನಿಕೇತಾನಂದನಿಗೂ ಕೂಡ (ಬಯಲು-ಬಸಿರು) ಆಧ್ಯಾತ್ಮಿಕ ಸಾಧನೆಯ ಆಕಾಂಕ್ಷೆಯಿದೆ. ಅದಕ್ಕಾಗಿ ಅನೈತಿಕಮಾರ್ಗ ಹಿಡಿಯುವ ಮನೋಭಾವವಿಲ್ಲ. ಅಂಥ ಮಾರ್ಗಗಳನ್ನು ಹಿಡಿಯುವವರ ಬಗ್ಗೆ ಸಹಾನುಭೂತಿ ಕೂಡ ಇಲ್ಲ. ಬದುಕಿನಲ್ಲಿ ಪೇಚಾಡಿದರೂ ದುಷ್ಟರಾಗದ, ಅನೈತಿಕರಾಗದ ಈ ಮನುಷ್ಯರಲ್ಲಿ ದೌರ್ಬಲ್ಯಗಳಿವೆಯೇ ಹೊರತು ದುಷ್ಟತನವಿಲ್ಲ.

ಕಾದಂಬರಿಗಳಲ್ಲಿ ದಟ್ಟವಾಗಿ ಅನಾವರಣಗೊಂಡದ್ದು ಬದುಕಿನ ಜೀವಂತಿಕೆ. ಗಂಡು-ಹೆಣ್ಣು ಎರಡೂ ಜೀವಿಗಳು ತಮ್ಮ ಸೋಲು-ಗೆಲುವಿನ ಮುಖಾಂತರ ಬದುಕಿನ ಜೀವಂತಿಕೆ ಕಾಣಿಸುತ್ತಿದ್ದಾರೆ. ದೇಶಪಾಂಡೆ (ಮುಗಿಯದ ಕತೆ) ಸರಸ್ವತಿಯ ಜೊತೆಗಿನ ದಾಂಪತ್ಯದಲ್ಲಿ ಸಾಮರಸ್ಯ ಕೈಗೆಟುಕದೆ ಒದ್ದಾಡುತ್ತಿದ್ದಾನೆ. ಊರುಬಿಟ್ಟು ಜೀವನ ಭದ್ರತೆಗಾಗಿ ಅಲಿಯುವ ರೊಳ್ಳಿ (ನಿರಿಂದ್ರಿಯ) ಚಿಕ್ಕ ನೌಕರಿಯಿಂದ ಅಧಿಕಾರಿಯ ಹುದ್ದೆಗೇರಿದ್ದಾನೆ. ಹಳ್ಳಿಯಲ್ಲಿ ಅಣ್ಣ-ತಮ್ಮಂದಿರೊಂದಿಗೆ ಹೆಣಗಾಡುತ್ತಾನೆ. ಹೆಂಡತಿಯ ಮೇಲೆ ಸಿಟ್ಟು ಮಾಡಿಕೊಂಡರೂ ಅತ್ಯಂತ ಪ್ರೀತಿಯಿಂದಲೂ ಬದುಕಬಲ್ಲ. ಮಕ್ಕಳೊಂದಿಗೆ ಮುಸುಕಿನ ಗುದ್ದಾಟವನ್ನೂ ಮಾಡಬಲ್ಲ. ತನ್ನ ಷಡ್ಡಕನೊಂದಿಗೆ ಬೆರೆಯಲಾಗದೆ ತಪ್ಪಿಸಿಕೊಳ್ಳಲು ಪರದಾಡುತ್ತಾನೆ. ಕೊನೆಗೆ ನಿವೃತ್ತಿಯ ಅಂಚಿನಲ್ಲಿ ಹೆಂಡತಿಯ ಮಡಿಲೊಳಗೆ ತಲೆಯಿಟ್ಟು ಮುಗುಳ್ನಗುತ್ತಾನೆ. ಅವನ ಹೆಂಡತಿ ವೃಂದಾ ಗಂಡನೊಂದಿಗೆ ಬದುಕಲು ಸಾಧ್ಯವೇ ಇಲ್ಲವೆನ್ನುವಂತೆ ಸರಳಿದ್ದಾಳೆ. ಹಳೆಯ ಪ್ರಿಯಕರನನ್ನು ನೆನಪಿಸಿಕೊಂಡು ತನ್ನ ಏಕಾಂತವನ್ನು ಮರೆಮಾಚಿಕೊಂಡಿದ್ದಾಳೆ. ಮತ್ತೆ ಇಲ್ಲ ನನಗೆ ರೊಳ್ಳಿಯೇ ಬೇಕು ಎನ್ನುವಂತೆ ಆರ್ತವಾಗಿ ಹಂಬಲಿಸಿದ್ದಾಳೆ. ಅಂದರೆ ಬದುಕಿನ ದುಃಖಿಗಳಿಗೆ ಹೆದರಿ ಆತ್ಮಹತ್ಯೆ ಮಾಡಿಕೊಳ್ಳುವುದಿಲ್ಲ. ಅದ್ಹೇಗೊ ಒಂದು ದಾರಿ ಹುಡುಕಿಕೊಳ್ಳುತ್ತಾರೆ. ಹೀಗೆ ಹುಡುಕಿದ ನಿಜವಾದ ದಾರಿ ಅಲ್ಲವೆಂತಲೂ ಅವರಿಗೆ ಗೊತ್ತಿದೆ. ಅವರ ಸಾಮಾನ್ಯ ಕಲ್ಪನೆಗಳನ್ನೆಲ್ಲ ಮೀರಿ ಜೀವನ ಬೆಳೆಯುತ್ತಿದೆ. ಬದುಕಿನ ಈ ಜೀವಂತಿಕೆಯನ್ನು ಕಾದಂಬರಿಗಳು ಗಾಢವಾಗಿ ಮನಗಾಣಿಸುತ್ತಿವೆ.

ಕುಸುಮಾಕರರ ಕಾದಂಬರಿಗಳಲ್ಲಿ ಆಳವಾದ ವ್ಯಂಗ್ಯವೂ ಇದೆ. 'ಬಯಲು-ಬಸಿರು' ಕಾದಂಬರಿಯಲ್ಲಿ ಈ ವ್ಯಂಗ್ಯ ಕಣ್ಣಿಗೆ ಹೊಡೆದು ಕಾಣುತ್ತದೆ. ನಾರ್ಮನ್ ಆಧ್ಯಾತ್ಮದ ಹುಡುಕಾಟಕ್ಕಾಗಿ ಮೊದಲಲ್ಲಿ ಹಣಕೊಟ್ಟು ಆಶ್ರಮವೊಂದನ್ನು ಸೇರಿದ್ದಾನೆ. ಸೂಚನಾಪತ್ರವನ್ನೋದಿ ಇಂಥ ಅಭ್ಯಾಸಕ್ರಮ ಬೇಡವಾಗಿ ಹಣವನ್ನು ವಾಪಸು ಕೊಡಬೇಕೆಂದು ಕೇಳಿಕೊಂಡರೂ ಕಾರ್ಯದರ್ಶಿ ಹಣ ಕೊಡಲು ನಿರಾಕರಿಸುತ್ತಾನೆ. ಅಭ್ಯಾಸಕ್ರಮವೆಲ್ಲ ಧ್ವನಿಸುರುಳಿಯ ಮುಖಾಂತರ ನಡೆದಿದೆ.

ಕಾರ್ಯದರ್ಶಿಯೊಬ್ಬ ಗುರುವಿನ ಪರಿಚಯ ಮಾಡಿಕೊಡುವ ರೀತಿ ಗಮನಿಸಿ:

'ಈ ವಿದ್ಯೆ ತುಂಬ ಪ್ರಾಚೀನವಾದುದು. ಸಾವಿರಾರು ವರ್ಷಗಳವರೆಗೆ ಲುಪ್ತವಾಗಿ ಹೋಗಿತ್ತು. ಆದುದರಿಂದ ಸಾಮಾನ್ಯರು ಇದರ ಫಲಗಳಿಂದ ವಂಚಿತರಾಗಿದ್ದರು. ಗುರುಗಳು ತಪಸ್ಸಿನಿಂದ, ಪರಿಶ್ರಮದಿಂದ ಈ ವಿದ್ಯೆಯನ್ನು ಜೀವಂತಗೊಳಿಸಿದ್ದಾರೆ. ಇವರ ತಾಯಿನಾಡು ಅಮೆರಿಕ ಇವರು ಮಾತ್ರ ವಿಶ್ವದ ಪ್ರಜೆ. ಪ್ರಜೆ ಒಂದೇ ಅಲ್ಲ, ವಿಶ್ವದ ಗುರು. ಅಮೆರಿಕೆಯಲ್ಲಿ ಇದ್ದರೆ ಅವರು ಎಷ್ಟೋ ಹಣವನ್ನು ಗಳಿಸಬಹುದಿತ್ತು. ಅವರು ಅದನ್ನು ತ್ಯಾಗ ಮಾಡಿ, ಭಾರತದಲ್ಲಿ ವೈರಾಗ್ಯದ ಜೀವನವನ್ನು ನಡೆಯಿಸುತ್ತಿದ್ದಾರೆ. ಇದು ಭಾರತದ ಭಾಗ್ಯ. ಒಂದು ಮಾತನ್ನು ಹೇಳುತ್ತೇನೆ; ಗಮನವೀಯಬೇಕು. ಗುರುಗಳು ಒಂದು ನಾಡಿನವರಲ್ಲ, ಒಂದು ಪಂಥದವರಲ್ಲ, ಸತ್ಯ ಯಾವುದೋ ಪಂಥದ ಗುತ್ತಿಗೆಯಲ್ಲ. ಗುರುಗಳು ಲೋಕದ ಮೂಲೆಮೂಲೆಯನ್ನು ಅಡ್ಡಾಡಿ ಎಲ್ಲ ಪಥಗಳಲ್ಲಿಯ, ಎಲ್ಲ ಪರಂಪರೆಗಳಲ್ಲಿಯ ಒಳ್ಳೆಯದನ್ನು ಸಂಗ್ರಹಿಸಿದ್ದಾರೆ. ಅಷ್ಟೇ ಅಲ್ಲ, ಲುಪ್ತವಾಗಿ ಹೋದ ಹಲವಾರು ವಿಶ್ವಕಲ್ಯಾಣವನ್ನು ಸಾಧಿಸುವ ದಾರಿಗಳನ್ನು ಕಂಡುಹಿಡಿದಿದ್ದಾರೆ. ಗುರುಗಳು ಸಮನ್ವಯಕಾರರು. ಅವರು ಮಾನವರಿಗೆ ಸುಲಭವಾದ, ಸಹಜವಾದ ದಾರಿಯನ್ನು

ಕೊಟ್ಟಿದ್ದಾರೆ. ಗುರುಗಳಿಗೆ ಈಗ ಎಪ್ಪತ್ತು ವರ್ಷ. ಆದರೂ ಅವರಲ್ಲಿ ಇಪ್ಪತ್ತರ ಉತ್ಸಾಹವಿದೆ. ಎಪ್ಪತ್ತರ ಪಕ್ವತೆ ಇದೆ. ಗುರುಗಳು ತಮಗೆ ಆರೋಗ್ಯವನ್ನು, ಸಮೃದ್ಧಿಯನ್ನು, ಆಂದವನ್ನು ಆಶೀರ್ವದಿಸುತ್ತಾರೆ. ಅದನ್ನು ನಿಮ್ಮ ನಿಮ್ಮ ಹೃದಯಗಳಲ್ಲಿ ತುಂಬಿಕೊಳ್ಳಬೇಕು.' (ಪು: ೪೪)

ಕಾರ್ಯದರ್ಶಿಯ ಮಾತುಗಳಾದ ಮೇಲೆ ಗುರುಗಳು ತಮ್ಮ ಕೈಗಳೆರಡನ್ನೂ ಮೇಲೆತ್ತಿ ಕೆಳಗೆ ತಂದು ಆರೋಗ್ಯವನ್ನು, ಆನಂದವನ್ನು ಕೊಟ್ಟ ಅಭಿನಯ ಮಾಡಿದರು ಎಂಬ ನಿರೂಪಣೆಯಿದೆ. ಸವಕಲಾದ ಮಾತುಗಳನ್ನು ಬಳಸುವ ಮೂಲಕ ಆಧ್ಯಾತ್ಮಿಕ ವ್ಯವಸ್ಥೆಯೊಳಗಿನ ಜಡತ್ವವನ್ನು ಕಾದಂಬರಿ ಹೊರಹಾಕುತ್ತದೆ.

ನಾರ್ಮನ್ 'ಐಹಿಕ ಸರಳ ಜೀವನ'ವೆಂಬ ವಿಷಯದ ಕುರಿತು ಐವತ್ತು ಶ್ರೀಮಂತರೆದುರು ಉಪನ್ಯಾಸ ಕೊಡಬೇಕಾದ ಸನ್ನಿವೇಶವೊಂದಿದೆ. ಶ್ರೀಮಂತ ಜಲೋಟಾ ನಾರ್ಮನ್‌ನ ಉಪನ್ಯಾಸವನ್ನು ವಿಶ್ವವಿದ್ಯಾಲಯ, ರೋಟರಿ ಕ್ಲಬ್ ಮುಂತಾದ ಕಡೆ ಏರ್ಪಡಿಸುತ್ತಾನೆ. ಧ್ವನಿಸುರುಳಿಯಲ್ಲಿ ಹಿಡಿದಿಟ್ಟಿದ್ದಾನೆ. ರಾಷ್ಟ್ರೀಯ ಆಂಗ್ಲ ಪತ್ರಿಕೆಗಳಲ್ಲಿ ವಿವರವಾದ ವಿಮರ್ಶೆ ಬರುವಂತೆ ನೋಡಿಕೊಂಡಿದ್ದಾನೆ. ಉಪನ್ಯಾಸಗಳನ್ನು ವಿಪುಲ ಸಂಖ್ಯೆಯಲ್ಲಿ ಮಾರಾಟ ಮಾಡಿದ್ದಾನೆ. ಇದೆಲ್ಲ ನಿರ್ಮಮವಾಗಿ ಚಿತ್ರಿತಗೊಂಡರೂ ಆಧ್ಯಾತ್ಮವನ್ನು ವ್ಯಾಪಾರಕ್ಕೀಡು ಮಾಡುವ ಆಧುನಿಕ ಮನಸ್ಥಿತಿಯನ್ನು ಸಂಕೇತಿಸುತ್ತದೆ ಫೆಂಗ್‌ಶುಯಿನ ಗುರುವೊಬ್ಬ ಜಲೋಟಾನ ಮನೆಗೆ ಬಂದು ವಾಯು-ಅಪ್ ತತ್ವಕ್ಕೆ ಅನುಗುಣವಾಗಿ ಮನೆಯ ಪೀಠೋಪಕರಣಗಳನ್ನು ಜೋಡಿಸಲು ಸೂಚಿಸುತ್ತಾನೆ. ಈ ಗುರು ಭಾರತಕ್ಕೆ ಬಂದಿದ್ದು ಯಾಕೆ? ಎಂಬ ವಿವರ ನೋಡಿದರೂ ಆಳದ ವ್ಯಂಗ್ಯ ಹೊಳೆಯುತ್ತದೆ: 'ಅಮೆರಿಕೆಯಲ್ಲಿ ಅವನ ಆಶ್ರಮವಿದೆ. ಜಗತ್ತಿನ ಮೂಲೆಮೂಲೆಗಳಿಂದ ಅಲ್ಲಿಗೆ ಜನ ಹೋಗುತ್ತಾರೆ. ಭಾರತ ಬಡದೇಶ. ಅಲ್ಲಿಗೆ ಹೋಗಿ ಬರುವುದು, ಅವರ ಶುಲ್ಕವನ್ನು ಕೊಡುವುದು ಭಾರತೀಯರಿಗೆ ಸಾಧ್ಯವಿಲ್ಲ. ಆದುದರಿಂದ ಅವರು ಭಾರತದ ಮೇಲೆ ಅನುಗ್ರಹ ಮಾಡಲೂ ಇಲ್ಲಿಗೆ ಬಂದಿದ್ದಾರೆ.' (ಬಯಲು- ಬಸಿರು.ಪು: ೫೭)

ನಾರ್ಮನ್ ಅನಿಕೇತಾನಂದನಾದ ಮೇಲೆ ಕಾಂಟ್ರ್ಯಾಕ್ಟ್‌ದಾರನೊಬ್ಬ ತನ್ನ ಹತ್ತು ಕೋಟಿ ವ್ಯವಹಾರದ ಬಗ್ಗೆ ಕೇಳಲು ಬಂದಿದ್ದಾನೆ. ಅನಿಕೇತನಾನಂದ ಗೂಢ ವಿದ್ಯೆಯ ಪುಸ್ತಕದ ಪುಟ ತೆಗೆದು ನೋಡಿದಾಗ ಅಲ್ಲಿ ಹೀಗೆ ಬರೆಯಲ್ಪಟ್ಟಿದೆ;

'ಇದು ಚೀನ ದೇಶದ ಗೂಢವಿದ್ಯೆ. ಪೃಥ್ವಿಯಲ್ಲಿ ವಾಯು ಮತ್ತು ಅಪ್ ಎರಡು ಶಕ್ತಿಗಳಿವೆ. ಈ ಸೃಷ್ಟಿಯಲ್ಲಿ, ಚರಾಚರ ವಸ್ತುಗಳಲ್ಲಿ ಆ ಶಕ್ತಿ ಇದೆ. ಚೈತನ್ಯವಿದೆ. ಅದರ ಸರಿಯಾದ ಬಳಕೆಯಿಲ್ಲ. ಅಪಾರ ಸಂಪತ್ತನ್ನು ಪಡೆಯಬಹುದು. ಅದರ ಶುಲ್ಕ ಕೇವಲ ಐದು ಸಾವಿರ ರೂಪಾಯಿ. ಪೂರ್ಣ ಅಭ್ಯಾಸ ಕ್ರಮ ಏಳು ದಿನಗಳದ್ದು.' (ಪು: ೫೮-೫೯)

ಆಧ್ಯಾತ್ಮದ ಹುಡುಕಾಟದ ಜೊತೆಗೆ ಇದರ ಸುತ್ತ ನಿರ್ಮಾಣವಾಗುವ ಹುಸಿವಾತಾವರಣವನ್ನು ಕಾದಂಬರಿ ಸೂಕ್ಷ್ಮವಾಗಿ ಹಿಡಿಯುತ್ತಿದೆ. ಹೀಗೆ ಹಿಡಿಯುವುದು ಬಹುಶಃ ಕಾದಂಬರಿಯ ಮುಖ್ಯ ಉದ್ದೇಶವಾಗಿರಲಿಕ್ಕಿಲ್ಲ. ಆದರೆ ಕಾದಂಬರಿಯ ಘಟನೆಗಳು ತನ್ನಿಂದ ತಾನೇ ಈ ವಿಷಾದ ವ್ಯಂಗ್ಯವನ್ನು ಸಾಕ್ಷಾತ್ಕಾರಗೊಳಿಸುತ್ತಿವೆ. ಇಲ್ಲಿಯೇ ಈ ಕಾದಂಬರಿಯ ಕುರಿತು ಇನ್ನೊಂದು ಮಾತು ಹೇಳಬಹುದೇನೋ: ಆಧ್ಯಾತ್ಮ ಮತ್ತದರ ಹುಡುಕಾಟಕ್ಕೆ ನಡೆವ ಪ್ರಯತ್ನಗಳನ್ನು ಹಲವಾರು ಕೃತಿಗಳಲ್ಲಿ ಓದಿ ಅತ್ಯಂತ ಜಾಣ್ಮೆಯಿಂದ ಪರಸ್ಪರ ಸಂಬಂಧಗಳನ್ನು ಹೆಣೆದು ಕುಸುಮಾಕರರು ಸಾದರ ಪಡಿಸುತಿದ್ದಾರೆಯೆ? ಅವರ ಹಿಂದಿನ ಕಾದಂಬರಿಗಳಲ್ಲಿ ಬದುಕಿ

ನೊಳಗಿಂದ ಮಾಡಿದ ಬಾಳುವ ಹಂಬಲಗಳು, ಗೊಂದಲಗಳು, ಸಮಾಧಾನಗಳು 'ಬಯಲು-ಬಸಿರು'ವಿನಲ್ಲಿಹೇರಿಕೊಂಡ ಆಧ್ಯಾತ್ಮದ ಹುಡುಕಾಟದಂತೆ ತೋರುತ್ತಿತ್ತು. ಆದರೆ ಈ ಕಾದಂಬರಿಯ ಬಂಧ ಎಷ್ಟು ಬಿಗುವಾಗಿದೆಯೆಂದರೆ ಅವರು ಯಾವ ಯಾವ ಮೂಲೆಗಳಿಂದ ಆಯ್ದು ತಂದಿದ್ದರೂ ಅವನ್ನೆಲ್ಲ ಒಂದು ಉದ್ದೇಶಕ್ಕೆ ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಅದರ ಕೃತಕತೆಯ ಪೂರೆ ಕಳಚಿಬಿದ್ದು ನಿಜವಾದ ಅನುಭವವೇ ಆಗಿ ದಿಕ್ಕು-ದಿಕ್ಕಿಗೆ ಹರಿಯುವಂತಾಗಿದೆ. ಇದೇನೆ ಇರಲಿ, ಅವರ ಎಲ್ಲ ಕಾದಂಬರಿಗಳಲ್ಲಿರುವ ತಾಂತ್ರಿಕ ನೈಪುಣ್ಯ ಬೆರಗುಗೊಳಿಸುವಂಥದ್ದು. ವಾಸ್ತವ ಮಾರ್ಗ, ಕನಸಿನ ಮಾರ್ಗ, ಮನಶ್ಶಾಸ್ತ್ರೀಯ ಮಾರ್ಗ ಮತ್ತು ಸಾಂಕೇತಿಕ ಮಾರ್ಗ – ಇಂಥ ಹಲವು ಮಾದರಿಗಳು ಕಾದಂಬರಿಯ ಶೈಲಿಯಲ್ಲಿ ಯಶಸ್ವಿಯಾಗಿ ಮಿಳಿತಗೊಂಡಿವೆ. ಸ್ವಕೇಂದ್ರಿತ ನಿರೂಪಣಾ ಕ್ರಮಗಳು, ಸಮರ್ಥನೆ ಮತ್ತು ಅಪರಾಧೀ ಪ್ರಜ್ಞೆಯನ್ನು ಏಕಕಾಲಕ್ಕೆ ಸೂಚಿಸುವ ಮಾತಿನ ವರಸೆಗಳು ಅತ್ಯಂತ ಕೌಶಲಪೂರ್ಣವಾಗಿ ಪ್ರಕಟಗೊಂಡಿವೆ. ಕಾದಂಬರಿಯೊಳಗಿನ ಬದುಕು ಭಾರತೀಯ ಜೀವನ ಕ್ರಮದ ಸಂವೇದನೆಗಳಿಂದ ಕೂಡಿದ್ದರೆ, ಬಂಧ ಮಾತ್ರ ಪಾಶ್ಚಾತ್ಯ ಓದಿನ ಫಲವಾಗಿದೆಯೇನೊ.

ಪಾಶ್ಚಾತ್ಯ ದೇಶಗಳ ಸಂಸ್ಕೃತಿ ಇಲ್ಲಿನ ಬೇರೆ ಬೇರೆ ಕಾದಂಬರಿಗಳಲ್ಲಿ ಮೆಚ್ಚುಗೆ, ಕುತೂಹಲ, ನಮ್ಮಲ್ಲಿ ಹೀಗಿಲ್ಲವಲ್ಲವೆಂಬ ಹಳಹಳಿಕೆಗಳೊಂದಿಗೆ ಉಲ್ಲೇಖಗೊಂಡಿದೆ. ಆದರೆ ಇವುಗಳ ಧ್ವನಿ ಮಾತ್ರ ವ್ಯಂಗ್ಯ ಮೂಲದ್ದು.

ಕಾದಂಬರಿ ಪ್ರಕಾರದ ಬಗೆಗೆ ಕುಸುಮಾಕರರು ತೋರಿಸಿದ ಶ್ರದ್ಧೆ ಅಪಾರವಾದದ್ದು. ಪ್ರಾಕ್ತನಶಾಸ್ತ್ರಜ್ಞನಂತೆ ನೆಲದೊಳಗೆ ಅಡಗಿರುವ ಸ್ಮಾರಕಗಳನ್ನು ಶೋಧಿಸಿ ನಿಧಾನಕ್ಕೆ ಹೊರತೆಗೆಯುವಂತೆ ಅವರು ವ್ಯಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಬದುಕಿನ ಒಳಪದರುಗಳನ್ನು ಶೋಧಿಸಿದ್ದಾರೆ. ಇದು ತನ್ನಷ್ಟಕ್ಕೆ ವಿಶಿಷ್ಟವಾದುದು ಮತ್ತು ಅನನ್ಯವಾದುದು ಕೂಡ ಹೌದು.

---

ಉಪನ್ಯಾಸಕರು, ಕನ್ನಡ ಸ್ನಾತಕೋತ್ತರ ಕೇಂದ್ರ
ಗುಲ್ಬರ್ಗಾ ವಿ.ವಿ. ನಂದಿಹಳ್ಳಿ - ೫೮೩ ೧೧೯
ಸಂಡೂರು, ಬಳ್ಳಾರಿ ಜಿಲ್ಲೆ



ಒಂದು ಪತ್ರ – ಉತ್ತರ

# ಉಳಿದ ತೊಟ್ಟಿಲು

✦ ಜಯಂತ ಕಾಯ್ಕಿಣಿ

ಪ್ರೀತಿಯ ಹಿರೀಕ ಕುಸುಮಾಕರ ದೇವರಗೆಣ್ಣೂರು ಅವರಿಗೆ,
ಮಮತೆಯ ವಂದನೆಗಳು

ಕೆಲ ತಿಂಗಳ ಹಿಂದೆ ಧಾರವಾಡದ ಸಾಧನಕೇರಿಯ ಸಮೀಪ ಕೆರೂರ್ ಅವರ ಮನೆಯ ಕಾಂಪೌಂಡಿನಲ್ಲಿ ಮಾವಿನ ಮರಗಳ ತೋಪಿನಲ್ಲಿ ಜೀರುಂಡೆಗಳ ಹಿಮ್ಮೇಳದಲ್ಲಿ ಕೂತು, ನಿಮ್ಮಿಂದ ಬೇಂದ್ರೆಯವರನ್ನು ಪಡೆದ ಅನುಭವ ನೆತ್ತರಲ್ಲಿ ಬಿಸಿಯಂತೆ ಇನ್ನೂ ಹರಿಯುತ್ತಿದೆ. ಆ ದಿನ ಬೇಂದ್ರೆಯವರ ಒಂದು ಮಾತು ಹೇಳಿದಿರಿ – "ಯಾರಿಗೆ ನೀರು ಕುಡಿದರೆ ಆನಂದ ಆಗುವುದಿಲ್ಲವೋ ಅವರಿಗೇನು ತಿಳೀತದೆ ಕಾವ್ಯದ ರುಚಿ?" – ಅಂತ ನಿಮ್ಮ ಜತೆಗಿನ ಆ ಸತ್ಸಂಗ ನಿಜಕ್ಕೂ ನೀರು ಕುಡಿದ ಆನಂದದಷ್ಟೇ ಸರಳವಿತ್ತು, ಸೂಕ್ಷ್ಮವಿತ್ತು ಮತ್ತು ಜೀವೋತ್ಕರ್ಷಕವಾಗಿತ್ತು. ಮಾತಿನ ಹಂಗಿಲ್ಲದ ನಿಮ್ಮ ತಿಳಿವಿನ ದಾಹವನ್ನು ಈ ಸಾಮಾನ್ಯ ಸಂಸಾರಿ ಜೀವನದ ಹುಲುಮಾತುಗಳ ಮೂಲಕವೇ ನೀವು ಹಂಚಿಕೊಂಡ ರೀತಿ, ನಿಮ್ಮ ಮುಗ್ಧ ಮನೋಹರ ನಗು... ಇವುಗಳು ಗುಂಗಿನಲ್ಲೆ ಇದ್ದಾಗಲೇ... ನಿಮ್ಮ 'ಬಯಲು-ಬಸಿರು' ಕಾದಂಬರಿ ಕೈಗೆ ಬಂತು. ಮತ್ತೆ ಎಲ್ಲ ಅಲ್ಲಿಂದಲೇ ಮುಂದರಿದಂತೆ ಆಯಿತು.

ಇದನ್ನು 'ಸುಮ್ಮನೆ' ಓದಿದೆ. ಸುಮ್ಮನೆ ಓದುವುದನ್ನೂ ಕಠಿಣ ಮಾಡಿಕೊಂಡು ಬಿಟ್ಟಿದ್ದೇನೆ ನಾನು. ಮನಸ್ಸಿನಲ್ಲಿ ನಾನಾ ನಮೂನೆಯ ಗೌಜು. ಅಪಸ್ವರಗಳ ಮಹಾ ಸಿಂಫನಿ. ನಿಮ್ಮ ಈ ಕಾದಂಬರಿಯ ಮುಖ್ಯ ಪಯಣಿಗ ನಾರ್ಮನ್‌ನ ಪಯಣ ಈ ಮಾನಸಿಕ ಮೌನದ ಕಡೆಗೇ ಇದೆ. "ಮೌನ ಬಹಿರಂಗ ಮೌನವಾದರೆ ಸಾಲದು. ಅದು ಮಾನಸಿಕ ಮೌನವಾಗಿಯೂ ಇರಬೇಕು" – ಎನ್ನುವ ಪಯಣವೇ ಈ ಕಾದಂಬರಿಯ ಉದ್ದೇಶ. ಇದನ್ನು ಕಾದಂಬರಿ ಎನ್ನಲೂ ಮನಸ್ಸಾಗುತ್ತಿಲ್ಲ. ಇದೊಂದು ಭಿನ್ನ ಬಗೆಯ ಟ್ರಾವಲಾಗ್ ಅಥವಾ ಪ್ರವಾಸ ಕಥನ ಅನಿಸುತ್ತಿದೆ. ಆದರೆ ಇನ್ನೊಂದು ಮಜಾ ಸವಾಲಿದೆ. ಏನೆಂದರೆ ಈ ಶಬ್ದ ಸ್ಪರ್ಶಗಳ ಲೋಕದಿಂದ ಮೌನದೆಡೆಗಿನ ಒಳ ಪಯಣವನ್ನು ನೀವು ಶಬ್ದಗಳನ್ನು ಬಳಸಿಯೇ ಮನಗಾಣಬೇಕಾಗಿದೆ! ಮತ್ತು ನಮಗೂ ಮನಗಾಣಿಸಬೇಕಾಗಿದೆ! ಶಬ್ದ ಅರ್ಥ ಹೀನ ಎನ್ನುವುದನ್ನು ಶಬ್ದದಲ್ಲಿಯೇ ಅಭಿನಯಿಸಿ ತೋರಿಸುವ ಪ್ರಾರಬ್ಧ ಇದು. ನೀವೇ ಹೇಳಿದಂತೆ 'ಕಿವಿಗಳನ್ನು ನಂಬದಿದ್ದರೂ ಇಲ್ಲಿ ಕಣ್ಣುಗಳನ್ನಂತೂ ನಂಬಲೇಬೇಕು!' ಇನ್ನು ಅಕ್ಷರಗಳನ್ನು? ಶಬ್ದಗಳನ್ನು?

ನಾರ್ಮನ್ ಎಂಬ ವಿದೇಶಿ ವಿಭ್ರಾಂತ, ತನ್ನ ನೆನಪುಗಳೊಂದಿಗೆ ಮತ್ತು ವರ್ತಮಾನದೊಂದಿಗೆ ಒಟ್ಟಿಗೇ ಏಗುತ್ತಾ ಮೆಲ್ಲಗೆ ಭಾರತಕ್ಕೆ ಬಂದು ಅನಿಕೇತಾನಂದನಾಗುವ ಈ ಕಥನ – ತನ್ನ ಉದರದಲ್ಲಿ ಬಗೆಬಗೆಯ ಉಪಕತೆಗಳನ್ನು ಹಸಿಹಸಿಯಾಗಿ ಇಟ್ಟುಕೊಂಡಿದೆ. ಸುಮಾರು ಹತ್ತು ಉಪಕತೆಗಳು, ದೃಷ್ಟಾಂತಗಳು ಗ್ರಾಫ್‌ನ ಬಿಂದುಗಳಂತೆ ಚುಕ್ಕಿಗಳಂತೆ ಇಲ್ಲಿ ಮಿನುಗುತ್ತಿದೆ. ಒಂದು ಕಡೆ ಶಿಷ್ಯನನ್ನು ಸ್ವೀಕರಿಸುವ ಮುನ್ನ ಪರೀಕ್ಷಿಸಲು ಗುರು – ನಿನ್ನ ಊರಿನ ಪೇಟೆಯಲ್ಲಿ ಅಕ್ಕಿ ಧಾರಣೆ ಏನು – ಎಂದು ಕೇಳುತ್ತಾನೆ. ಅವನು ಗೊತ್ತಿಲ್ಲ ಎಂದು ಹೇಳಿ ಉತ್ತೀರ್ಣನಾಗುತ್ತಾನೆ. ಇನ್ನೊಂದು ಕಡೆ ಅಗಣಿತ ಸಂಪತ್ತು ಕರುಣಿಸಿದವನು – ಈ ಹಣ ಎಣಿಸುವಾಗ ಬಿಳಿ ಆನೆಯನ್ನು ನೀನು ನೆನೆಯಕೂಡದು – ಎಂದು ತಾಕೀತು ಮಾಡುತ್ತಾನೆ. ಬಡ್ಡೀಮಗಂದು ಆ ಬಿಳಿ ಆನೆ ಅವನ ಮನದಿಂದ ಆನಂತರ ಬಿಟ್ಟುಹೋದರೆ ತಾನೆ! ಕೃತಿಯಲ್ಲಿ ಈ ದೃಷ್ಟಾಂತಗಳ ಬಳಕೆ ಎಷ್ಟು ಕುತೂಹಲಕಾರಿಯಾಗಿ ಯಶ ಪಡೆದಿದೆಯೆಂದರೆ – ಕೃತಿಯಲ್ಲಿ ನಡೆಯುವ ಕೆಲ ಘಟನೆಗಳೂ, ನಾರ್ಮನ್‌ನ ನಿಜಜೀವನದ ನೆನಪುಗಳೂ ಕೂಡ ಇದೇ ಬಗೆಯ ಉಪಕತೆಗಳಂತೆ, ದೃಷ್ಟಾಂತಗಳಂತೆ ಭಾಸವಾಗತೊಡಗುತ್ತವೆ. ಅಂದರೆ ಜೀವನದ ಅನುಭವಗಳನ್ನೇ ದೃಷ್ಟಾಂತದಂತೆ ನೋಡಲು ಅರ್ಹನಾಗುವುದೇ ಒಬ್ಬ ಜೀವಿಯ ತಿಳಿವಿನ ಪಯಣದ ಮುಖ್ಯ ಆರಂಭ ಎನ್ನುವುದನ್ನು ಈ ಕೃತಿ ಅತಿ ಸೂಕ್ಷ್ಮವಾಗಿ ಹೊಮ್ಮಿಸುತ್ತದೆ. ತಲೆಬಿಂದ ಹೊರೆಯನ್ನು ಇಳಿಸುವ ವರಸೆಯನ್ನು ದುಡ್ಡಿಗೆ ಮಾರುವ ಭರಾಟೆಯಲ್ಲಿರುವ ಇಂದಿನ 'ಆತ್ಮಶಾಂತಿ'ಯ ಅಂಗಡಿಗಳ ಹೊಸಪೇಟೆಯನ್ನು ಈ ಕೃತಿ ಸೂಕ್ಷ್ಮವಾಗಿ ಲೇವಡಿ ಮಾಡುತ್ತದೆ. ಅಂಥಲ್ಲಿ ಕೋಲ್ಮಿಂಚಿನಂತೆ ಕೆಲ ಮಾತುಗಳು ಹೊಳೆಯುತ್ತವೆ:

"ನಿನ್ನದು ದಾನವಾಗದಿರಲಿ, ತ್ಯಾಗವಾಗಲಿ."

"ತಿಳಿವು ಭಿಕ್ಷೆಯಿಂದ ಬರುವುದಿಲ್ಲ"

"ಕಲಿತುದು ಸ್ಮೃತಿಯಾಗುತ್ತದೆ, ಸ್ಮೃತಿ ಜ್ಞಾನವಲ್ಲ"

"ಜ್ಞಾನ ಕೊಡಲು ಸಮಯ ತೀರ ಕಡಮೆ ಬೇಕು. ಸಿಡಿಲು ಮಿಂಚುಗಳಿಗೆ ತಗಲುವ ವೇಳೆಗಿಂತ ಕಡಮೆ ವೇಳೆ ಸಾಕು."

"ಮನಸ್ಸು ಒಂದು ಶಕ್ತಿ. ಶಕ್ತಿಗೆಂದಾದರೂ ದಣಿವುಂಟೆ?"

ಉಪಕತೆಗಳ ಜತೆಗೆ ವಿಲಕ್ಷಣ ಸ್ವಪ್ನಗಳೂ ಈ ಕೃತಿಯಲ್ಲಿ ಮೂಡಿ ಮಾಯವಾಗುತ್ತವೆ. "ಶಬ್ದಾತೀತವಾದ ಮೌನ ಚಿಂತನವಿದೆ. ಅದು ಪ್ರತಿಮೆಗಳಲ್ಲಿ ಮಾತನಾಡುತ್ತದೆ. ಶಬ್ದಗಳಲ್ಲಿ ಅಲ್ಲ" – ಎನ್ನುವ ನಿಮ್ಮ ಈ ಸಾಲು ಈ ಕೃತಿಯ ಆಕೃತಿಯ ಬಗ್ಗೆ ಅಡಿವಂತಿದೆ. ಏಕೆಂದರೆ ಭಾಷೆಯ ಭಾರದಿಂದ

ಬಿಡಿಸಿ ಆಚೆ ನೋಡಬೇಕಾದರೆ, ಭಾಷೆಯಲ್ಲಿ ಸಿಕ್ಕು ಬೀಳದೆ ಉಳಿಯಬೇಕಾದರೆ ಪ್ರತಿಮೆಗಳು, ಸ್ವಪ್ನ ಚಿತ್ರಗಳೇ ನಮ್ಮನ್ನು ಎತ್ತಬೇಕಾಗುತ್ತದೆ. ಇಲ್ಲಿಯ ಸ್ವಪ್ನಗಳಲ್ಲಿ ಬರುವ ಮೊಸಳೆಗಳು, ವಿಮಾನಗಳು, ರೂಪಕಗಳಂತೆ ಬರುವ ಪೆಟ್ರೋಲಿನ ಸಮುದ್ರ, ಟೀವಿ, ಕಡ್ಡಿಪೆಟ್ಟಿಗೆ – ಇವೆಲ್ಲವೂ ಕಥೆಯ ಜೀವವನ್ನು ಅದರ ಶರೀರದಿಂದ ಮುಕ್ತಗೊಳಿಸುವ ವಿಧಾನಗಳಾಗೇ ನನಗೆ ತೋರುತ್ತಿವೆ. ಪೆಟ್ರೋಲು ಸಮುದ್ರದಲ್ಲಿ ಎದುರು-ಬದುರು, ಕೈಲಿ ಕಡ್ಡಿಪೆಟ್ಟಿಗೆ ಹಿಡಿದು ನಿಂತ ಮನುಜ ಯೋಧರ ಚಿತ್ರ ಕಳವಳ ಉಕ್ಕಿಸುತ್ತದೆ. ಬುದ್ಧ ಡ್ಯಾಸ್ಟೋವಸ್ಕಿಯ ಬಳಿ "ಅಂಗುಲಿಮಾಲ"ನ ಉದ್ಧಾರವನ್ನು ಬೇಡುವ ರೀತಿಗೆ ನನ್ನ ಮೈಜುಮ್ಮೆಂದಿತು. "ಅಂಗುಲಿಮಾಲ ದಾರಿ ತಪ್ಪಿದ ಹುಡುಗ ಹಿಂಸೆಯನ್ನು ಖಂಡಿತ ಬಿಡುತ್ತಾನೆ" – ಎನ್ನುವ ಬುದ್ಧ ಮಾಸ್ತರರೆದುರು ಅಂಗಲಾಚುತ್ತಿರುವ ಪುಂಡ ವಿದ್ಯಾರ್ಥಿಯ ತಾಯಿಯಂತೆ ತೋರುತ್ತಾನೆ. ಕೇರಿಕೇರಿಗಳಲ್ಲಿ ಕಂಗೆಟ್ಟು ಕೂತ ಇಂದಿನ ಅಕ್ಟೋಪಿಗಳ ಅಂಗುಲಿಮಾಲರು ಕಣ್ಣೆದುರು ಬಂದು ಕಣ್ಣು ಮಂಜಾಯಿತು.

"ಅವಳ ದನಿಯೂ ಸೊಗಸಾಗಿತ್ತು. ಅವಳ ದನಿ ನಾನು ಏಕಾಕಿಯಾಗಿದ್ದಾಗ ನನ್ನ ಹೃದಯದಲ್ಲಿ ಇನ್ನೂ ಇಂಪನ್ನು ಬೀರುತ್ತದೆ"– ಎಂದು ನಾರ್ಮನ್ ತನ್ನ ತಾಯಿಯ ದನಿಯನ್ನು ನೆನೆಯುವ ಕ್ಷಣ ಅಪರೂಪದ್ದಾಗಿದೆ. ಇಲ್ಲಿ ನನಗೆ ಬೇಂದ್ರೆ, ಟಾಗೋರ್ ಮತ್ತು ನೀವು ಒಟ್ಟಿಗೇ ಸಂಗಮಿಸಿದಂತೆ ಅನಿಸಿತು. ಏಕೆಂದರೆ ಹಿಂದೆ ಬೇಂದ್ರೆಯವರ ಕಾವ್ಯದ ಬಗ್ಗೆ ಬರೆಯುತ್ತ ನೀವು ಟಾಗೋರರ– "ಸಂಜೆಗತ್ತಲಲ್ಲಿ ಕೇಳಿದ ತಾಯಿಯ ಸ್ವರದಲ್ಲಿ ತಾರೆಗಳ ಅರ್ಥ ಹೊಳೆಯಿತು" – ಸಾಲನ್ನು ನೆನೆದದ್ದು ಮರುಕಳಿಸಿತು.

ನೀವು 'ವಿಸ್ಮಯದ ಗುಹೆ', ವಿತುಷ್ಠತೆ', 'ಲುಪ್ತ' – ಇಂಥ ಪದಗಳನ್ನು ವಿರಲ ಕಾಂತಿಯಲ್ಲಿ ಬಳಸುತ್ತೀರಿ. ಕೆಲವು ಕಡೆ ಚಂದ ಬರೆದೂ ಅದಕ್ಕಂಟಿಕೊಳ್ಳದೆ ಮುಂದೆ ಸರಿಯುತ್ತೀರಿ. ಉದಾ – "ವೇಳೆ ಅವನ ಮೇಲೆ ಸತ್ತ ಹೆಬ್ಬಾವಿನಂತೆ ಎರಗಿತು. ಅದನ್ನು ಕೈಗಳಿಂದ ಸರಿಸಿ, ಆಚೆಗೆ ಎಸೆಯಲು ಪ್ರಯತ್ನಿಸಿದ." "ಹಲವು ಬಗೆಯ ಆಂಶೆಗಳು ಹೃದಯದ ಆಕಾಶದಲ್ಲಿ ಕಾಮನಬಿಲ್ಲಿನಂತೆ ಮೂಡಿ ಅಳಿಸಿಹೋದವು" – ಇತ್ಯಾದಿ.

ಭೌತಿಕತೆಯನ್ನು ತ್ಯಜಿಸುವ ಅಥವಾ ಮೀರುವ ಹೋರಾಟದಲ್ಲಿರುವ ನಾರ್ಮನ್‌ನ ಮೂಗಿನಿಂದ ರಕ್ತ ಸುರಿಯುವ ಕ್ಷಣವಿದೆಯಲ್ಲ ಅಲ್ಲಿ ಸರ್, ಯಾಕೋ ಕೃತಿ ನನ್ನಲ್ಲಿ ತೀರ ಮುಜುಗರವನ್ನೂ, ಅತೃಪ್ತಿಯನ್ನೂ ಉಂಟುಮಾಡಿತು. 'ವಿನಾಮಿ' ರೋಗದ ಲಕ್ಷಣಗಳ ಪಟ್ಟಿ ಬಂದ ತಕ್ಷಣ ಯಾವುದೋ ಹದ ತಪ್ಪಿಹೋದಂತೆ ಭಾಸವಾಯಿತು. 'ಅಸಂಗ್ರಹ ವೃತ್ತಿ' – ತನ್ನದಾಗಬೇಕು ಎಂದು ಹೊರಟ ನಾರ್ಮನ್‌ನ ಅನ್‌ಬರ್ಡನಿಂಗ್ ಅಥವಾ ಅನ್‌ಲೋಡಿಂಗ್‌ನ ಕಥನದ ಆರಂಭದ – ಈ ಸಾಲು ನೋಡಿ : "ಎಲ್ಲಿಯೋ ಓದಿದ ಒಂದು ಮಾತು, ಹಾದಿ ತಪ್ಪಿದ ಹಕ್ಕಿ ಹಾರಿ ಬರುವ ಹಾಗೆ ಬಂದು ಇವನ ಮನದ ಮರದ ಟೊಂಗೆಯ ಮೇಲೆ ವಿಶ್ರಮಿಸಿತು." ಈ ಸಾಲಿನಲ್ಲಿ ಎಷ್ಟೊಂದು ಹಗುರ ಇದೆ, ಸಮಾಧಾನ ಇದೆ. ಆದರೆ ಕಥನದ ಕೊನೆಯ ಭಾಗಕ್ಕೆ ಬಂದಂತೆ ಹಗುರಿನ ಬದಲಿಗೆ ಯಾವುದೋ ಭಾರ, ಹಿಂಸೆ, ಕ್ಷೋಭೆ – ಅಕ್ಷರಶಃ ಭೌತಿಕ ಅನಿಸುವ ನೋವು ಆವರಿಸುತ್ತ – ಕೃತಿಯನ್ನು ಕಂಗೆಡಿಸಿದಂತೆ ಭಾಸವಾಯಿತು. ನಿಮ್ಮ ಆಶಯವೇ ಅದಿತ್ತೆ? ಅವನ ಪಾಡು, ಜಗದ ಪಾಡೂ ಆಗಬೇಕೆಂಬ ಕೃತಿಯ ಹಟದಿಂದ ಹೀಗಾಯಿತೆ? ಅಥವಾ ಉಪಕಥೆಗಳ, ಸ್ವಪ್ನಗಳ ವಿಧಾನದಿಂದ ಒಮ್ಮೆಗೆ 'ಮಾಹಿತಿಗಳ' ಬಳಕೆಗೆ ಕೃತಿ ಹೊರಳಿಕೊಂಡದ್ದರಿಂದ ಹೀಗಾಯಿತೆ? ಅಥವಾ ಓದುಗನಾಗಿ ನಾನೇ ಕೃತಿಯ ಪ್ರವಾಹದಿಂದ Drop out ಆದೆನೆ?

ನಿಮ್ಮ 'drop out' ವಿಶ್ಲೇಷಣೆ ತುಂಬಾ ಮನೋಜ್ಞವಾಗಿದೆ. ಪ್ರವಾಹದಿಂದ ಹೊರಬಿದ್ದ ಹನಿ ಅಷ್ಟೆ ಆಗದೆ ಅದು ಹುಟ್ಟಿನ ಹಲವು ಮೂಲವನ್ನೂ ಧ್ವನಿಸುವಂತಿದೆ!

ನಾರ್ಮನ್ ಬಾಲ್ಯದಲ್ಲಿ ಕೇಳಿದ್ದ ''ರೆಡ್ ರೈಡಿಂಗ್ ಹುಡ್'' ಕಥೆಯಲ್ಲಿ ದುಷ್ಟ ತೋಳ ಅಜ್ಜಿಯ ರೂಪದಲ್ಲಿ ಬಂದು ಪುಟ್ಟ ಮಗುವನ್ನು ತಿನ್ನಲು, ಹವಣಿಸುತ್ತದೆ. ಆದರೆ ಅವನು ಭಾರತದಲ್ಲಿ ಕೇಳಿದ 'ಕಾಡಿನ ಗೋಪಾಲ' ಕಥೆಯಲ್ಲಿ, ಕಾಡಿನಲ್ಲಿ ಹಾದಿ ತಪ್ಪಿದ ಮಗು ಕೂಗಿ ಕರೆದರೆ ಸಾಕು 'ಕಾಣದ ಗೋಪಾಲ' ಬಂದು ಜತೆ ನೀಡುತ್ತಾನೆ. ಅಂದರೆ 'ಅಭಯ'ದ ಅಪೇಕ್ಷೆಯ ಆವರಣದಿಂದ, ಸಂಪೂರ್ಣ 'ನಿರ್ಭಯ'ದ ಆವರಣಕ್ಕೆ ಚಲಿಸುವ ಹಂಬಲದಲ್ಲಿ ನಾರ್ಮನ್‌ನ ವಿಕಾಸ ಇದೆ. ಆದರೆ ಕೊನೆಗೆ ನಿರ್ಭಯ ಲೋಕದಲ್ಲಿ ಸುರಕ್ಷಿತವಾಗಿ ಸಾಬೀತಾಗಿ ಉಳಿದದ್ದು 'ತೊಟ್ಟಿಲು' ಮಾತ್ರ, ಶಿಶುವಲ್ಲ – ಎಂಬ ದಾರುಣ ಚಿತ್ರದೊಂದಿಗೆ ಕೃತಿ ಮುಗಿಯುತ್ತದೆ.

ಸ್ವಲ್ಪ ಆಚೆಯಿಂದ ನೋಡಿದರೆ ನನಗೆ, 'ನಾಲ್ಕನೆಯ ಆಯಾಮ'ದಲ್ಲಿ ಆರಂಭಗೊಂಡ ನಿಮ್ಮ ಪಯಣವೂ 'ನಿರಿಂದ್ರಿಯ'ದಲ್ಲಿ ಹೊಸ ಹಾದಿ ಹಿಡಿದು ಈಗ ಇಲ್ಲಿ ಅತ್ಯಂತ ಮುಕ್ತವಾದ ರನ್‌ವೇ ತಲುಪಿದೆ ಎಂದೂ ಅನಿಸುತ್ತದೆ. ಆದರೆ ಇಲ್ಲಿ ನಿಮ್ಮ ಸಂಕಟ ಇನ್ನೂ ಹೆಚ್ಚು. ಏಕೆಂದರೆ ಮಣ್ಣಿನ ನಂಟು ಬಿಡುವಂತಿಲ್ಲ, ಗಗನದ ಸೆಳೆತ ತಪ್ಪಿಸಿಕೊಳ್ಳುವಂತಿಲ್ಲ. ಇದರಲ್ಲಿ ನೀವು ಬಣ್ಣಿಸಿದ 'ಬ್ಯಾಬೆಲ್ ಗೋಪುರ'–ದ ಕಲ್ಪನೆ ಎಷ್ಟು ಅದ್ಭುತವಾಗಿದೆಯಲ್ಲ. ದೇವಲೋಕಕ್ಕೆ ಮನುಷ್ಯ ಗೋಪುರ ಕಟ್ಟಲು ತೊಡಗುವುದು ಇನ್ನೇನು ತಲುಪುತ್ತದೆ ಅನ್ನುವಷ್ಟರಲ್ಲಿ ಮನುಷ್ಯರಲ್ಲಿ ಭಾಷೆಗಳು ಹುಟ್ಟುವುದು ಮತ್ತು ಭಾಷೆ ಹುಟ್ಟಿದ್ದೇ – ಒಬ್ಬರ ಮಾತು ಇನ್ನೊಬ್ಬರಿಗೆ ತಿಳಿಯದಂತಾಗಿ ಗೋಪುರ ನಿರ್ಮಾಣ ಅಲ್ಲೇ ಅರ್ಧಮರ್ಧ ನಿಂತುಹೋಗಿರುವುದು! ಒಮ್ಮೆ ಅನಿಸುತ್ತದೆ. ಅದೇ ಸರಿ ಬಿಡಿ. ಹುಟ್ಟಿದ ತಕ್ಷಣ ಸೀದಾ ಸ್ವರ್ಗಕ್ಕೇ ಹೋಗುವುದರಲ್ಲಿ ಏನು ಮಜಾ ಇದೆ. ನಮ್ಮದೇನಿದ್ದರೂ ಲೇವಾದೇವಿ, ಜಗಳಾ ಎಲ್ಲಾ ಈ ಕಾಮನ ಕಟ್ಟೆಯಲ್ಲೇ ಆಗಬೇಕು ತಾನೆ?

''ವ್ಯವಹಾರದಲ್ಲಿಯ ಮೋಸಕ್ಕೆ ಮಾತ್ರ ಮೋಸ ಎನ್ನುತ್ತಾರೆ. ಅಧ್ಯಾತ್ಮದಲ್ಲಿಯ ವಂಚನೆಗಳನ್ನು ಸತ್ಯ ಎಂದು ಜನ ನಂಬುತ್ತಾರೆ'' – ಎನ್ನುತ್ತದೆ ಇಲ್ಲಿಯ ಒಂದು ಸಾಲು. ಅಧ್ಯಾತ್ಮದ ಮಟ್ಟಿಗೇ ಅದ ಸಾಹಿತ್ಯಕ್ಕೂ ಇದು ಎಷ್ಟು ಚೆನ್ನಾಗಿ ಅನ್ವಯಿಸುತ್ತದೆ. ಈ ಕಾಲದ ಅತ್ಯಂತ ನೋವಿನ ನಾಡಿಯ ಮೇಲೆ ಬೆರಳನ್ನಿಟ್ಟಿದ್ದೀರಿ ಸರ್. ''ಪ್ರಮಾಣ'' ಮತ್ತು ''ಪ್ರಾಮಾಣಿಕತೆ'' ಎರಡಕ್ಕೂ ಎರವಾಗಿರುವ ಇಂದಿನ ಮನುಜನ ಕುರಿತು ನಿಮ್ಮ ಕಾಳಜಿ, ಭಯ, ಎರಡೂ ಏಕಕಾಲಕ್ಕೆ ಈ ಕೃತಿಯಿಂದ ಹೊಮ್ಮಿದೆ. ಅಸಾಹಿತ್ತಿಕವನ್ನು ಸಾಹಿತ್ಯಕ್ಕೆ ತರುವ ನಿಮ್ಮ ಸಾಹಸ ಇದು. ಖಾಲಿ ತೊಟ್ಟಿಲ ತೂಗಬಾರದು ಅನ್ನುತ್ತಾರೆ. ಆದರೆ ನಿಮ್ಮಂಥ ಮುಕ್ತ ಮಮತಾಮಯಿ ತೂಗಿದರೆ ಎಲ್ಲವೂ ಹೊಸದಾಗಿ ಚಿಗುರಬಹುದು. ಶಿಶುವಿನ ಅಳು ಕೇಳಬಹುದು ಎಂಬ ಆಸೆ. ನನ್ನ ಓದು ತಪ್ಪಿದ್ದರೆ ದಯವಿಟ್ಟು ತಿದ್ದಿ.

ಒಮ್ಮೆ ಸೊಲ್ಲಾಪುರಕ್ಕೆ ಬಂದು ಸುಮ್ಮನೆ ನಿಮ್ಮೊಡನೆ ಕೂಡಬೇಕು.

ಅಕ್ಕರೆ ಆದರಪೂರ್ವಕ

ನಿಮ್ಮ
ಜಯಂತ



# ಸೃಜನಶೀಲತೆ ಪರಾವಲಂಬಿ

✦ ಕುಸುಮಾಕರ ದೇವರಗೆಣ್ಣೂರು

ಪ್ರಿಯ ಆತ್ಮೀಯ ಜಯಂತ
ಅವರಿಗೆ

ಸ್ನೇಹಪೂರ್ವಕ ಶುಭಾಶಯಗಳು.

ತಾವು ನನ್ನಲ್ಲಿ ಇಟ್ಟುಕೊಂಡ ಪ್ರೀತಿ-ವಿಶ್ವಾಸಗಳಿಗಾಗಿ ಕೃತಜ್ಞನಾದ ನಾನು ಅವುಗಳಿಗೆ ಪಾತ್ರನಾಗಲು ಎಚ್ಚರದಿಂದ, ವಿವೇಕದಿಂದ ನಡೆಯುವ ಭರವಸೆಯನ್ನು ಕೊಡುತ್ತೇನೆ.

ಬಿಡುವು ಮಾಡಿಕೊಂಡು 'ಬಯಲು ಬಸಿರು' ಇದನ್ನು ಓದಿ ತಮ್ಮ ಅನಿಸಿಕೆಗಳನ್ನು ನನ್ನೊಡನೆ ಹಂಚಿಕೊಂಡುದಕ್ಕಾಗಿ ತಮಗೆ ಋಣಿಯಾಗಿದ್ದೇನೆ. ಒಂದು ವಿಷಯವನ್ನು ಕುರಿತು ಬರೆಯಬೇಕು ಎನಿಸುತ್ತದೆ. ನಿಮ್ಮ "ಸರ್... ಯಾಕೋ..." ಈ ವಾಕ್ಯ ವೃಂದವನ್ನು ಗಮನಿಸಿರಿ. ನಾನು ಕೃತಿಯ ಸಮರ್ಥನೆಗೆ ತೊಡಗುವುದಿಲ್ಲ. ಆದರೆ ನನ್ನ ಕೃತಿಗಳ ವಿಷಯದಲ್ಲಿ ಒಂದು ಮಾತನ್ನು ಮಾತ್ರ ಹೇಳಬಯಸುತ್ತೇನೆ. ನನ್ನ ಎಲ್ಲ ಕೃತಿಗಳ ವಿಷಯದಲ್ಲೂ ಈ ಮಾತನ್ನು ಹೇಳಬಹುದು. Jung called art 'a glimpse into the

unfathomable abiss,' jung said such works 'positively force themselves upon the author, his hand is sized, his pen writes things that his mind contemplates in amazement. The work brings with it its own form; anything he watnts to add is rejected, and what he himself would like to reject is thrust back at him. While his conscious mind stands amazed and empty before this, he is overwhelmed by a flood of thoughts and images which he had neven intended to creat and which his own will would never have brought into being. Yet inspite of himself he is forced to admit that his ownself speaking, his own inner nature revealing itself and uttering things which he would never have entrusted to his tongue.' ಜುಂಗ್ ಮತ್ತೂ ಹೇಳುತ್ತಾನೆ.

'Do we delude ourselves in thinking that we posess and control our own psyches and is what science calls the psyche not just a question, and make arbitarily confined whithin the seull, but rather a door that opens upon the human world from a world beyond, allowing unknown and mysterious powers to act on man and carry him on the wings of the night to a more than personal destiny?'

ನನಗೆ ಇಲ್ಲಿ 'ಅಗಾಥಾ ಕ್ರಿಸ್ತಿ' ಬರೆದ ಒಂದು ಕಥೆ ನೆನಪಾಗುತ್ತದೆ. ಅವಳ ಪುಸ್ತಕಗಳನ್ನು ನಾನು ಓದಿಲ್ಲ. ಆದರೆ ಓದಿದ ಯಾವುದೋ ಭಾಗದ ಒಂದು ಕಥೆ ನೆನಪಿನಲ್ಲಿದೆ. ಒಬ್ಬ ಕಲಾವಿದೆ, ಅವಳು ಮಣ್ಣಿನಿಂದ ಮೂರ್ತಿಗಳನ್ನು ತಯಾರಿಸುತ್ತಾಳೆ. ಒಂದು ದಿನ ಅವಳು model ಎಂದು ಒಬ್ಬ ಸುಂದರ ತರುಣಿಯನ್ನು ಆರಿಸಿಕೊಂಡಿದ್ದಾಳೆ. ಆ model ತುಂಬ ಚೆಲುವಿ. ಆದರೆ ಮಾನಸಿಕವಾಗಿ ತುಂಬ ಕ್ಷುದ್ರಳಾಗಿದ್ದಾಳೆ. ತುಂಬ ಅಹಂಕಾರಿ. ಕಲಾವಿದೆ ಮೂರ್ತಿಯನ್ನು ರೂಪಿಸುತ್ತಿರುವಾಗ ಅವಳು ಮನಬಂದಂತೆ ಅನಿರ್ಬಂಧವಾಗಿ ಮಾತನಾಡುತ್ತಿದ್ದಾಳೆ. ಕಲಾವಿದೆ ಹೇಳುತ್ತಾಳೆ, ಮಾತನಾಡಬೇಡ. ನಿನ್ನ ಮಾತುಗಳಿಂದ ನನ್ನ ಕೃತಿಯ ಮೇಲೆ ದುಷ್ಪರಿಣಾಮ ಆಗುತ್ತದೆ. ಆದ್ದರಿಂದ ಕಲಾಕೃತಿ ಕೆಡುತ್ತದೆ. ಆದರೆ ಆ model ಮಾತು ನಿಲ್ಲಿಸುವುದಿಲ್ಲ. ಕಲಾವಿದೆ ಅವಳಿಂದ ಬೇಸತ್ತಾಗಿ, ಅವಳ ಮಾತುಗಳನ್ನು ಕಿವಿಗಳ ಮೇಲೆ ಹಾಕಿಕೊಳ್ಳದೆ ಕಲಾಕೃತಿಯ ನಿರ್ಮಾಣದಲ್ಲಿ ತೊಡಗುತ್ತಾಳೆ. ಕೃತಿ ಸಿದ್ಧವಾಗುತ್ತದೆ. ಅದರ ಮೇಲೆ ಒದ್ದೆಯ ಅರಿವೆಯ ಮುಸುಕನ್ನು ಹಾಕಿ ಕಲಾವಿದೆ ನಿಶ್ಚಿಂತಳಾಗುತ್ತಾಳೆ. ಆದರೆ ರಾತ್ರಿ ಅವಳಿಗೇ ನಿದ್ದೆ ಬರುವುದಿಲ್ಲ. ಏನೋ ತಳಮಳ. ತಡೆಯಲಾರದೆ ಎದ್ದು ಹೋಗಿ ಮೂರ್ತಿಯ ಮೇಲಿನ ಒದ್ದೆ ಬಟ್ಟೆಯನ್ನು ಸರಿಸಿ ನೋಡುತ್ತಾಳೆ. ಅವಳಿಗೇ ಅಸಹ್ಯ ವೇದನೆಯಾಗುತ್ತದೆ. ತಾನು ಮನಸಿನಲ್ಲಿ ಕಲ್ಪಿಸಿಕೊಂಡ ಸೌಂದರ್ಯ ಮೂರ್ತಿಯಲ್ಲಿ ಬಂದಿಲ್ಲ. ಯಾವುದೋ ವಿಕೃತಿ ಅಭಿವ್ಯಕ್ತಗೊಂಡಿದೆ. ಅವಳು ಕಣ್ಣು ಮುಚ್ಚಿ ರಭಸದಿಂದ ಆ ಮೂರ್ತಿಯನ್ನು ಮಣ್ಣಿನ ಮುದ್ದೆಯನ್ನು ಮಾಡಿ ಒಗೆಯುತ್ತಾಳೆ.

ನಾನು ಒಂದು ಕೃತಿಯನ್ನು ಬರೆಯುವಾಗ ಮನಸ್ಸಿನಲ್ಲಿ ಯಾವುದೇ ಬಗೆಯ ಕಲ್ಪನೆಯನ್ನೊ, ಸಂಕಲ್ಪವನ್ನೊ ಇಟ್ಟುಕೊಳ್ಳುವುದಿಲ್ಲ. ಅದುದರಿಂದ ನನ್ನ ಮನಸ್ಸಿನ ಇಚ್ಛೆಯಂತೆ ಒಂದು ಕೃತಿಯನ್ನು ರೂಪಿಸುವ ಹಂಬಲವೂ ನನಗೆ ಇಲ್ಲ. ಒಂದು ರೀತಿಯಿಂದ ಒಬ್ಬ ಸ್ತ್ರೀ ಸಂತಾನ ಉತ್ಪತ್ತಿಯಲ್ಲಿ ಎಷ್ಟು ಪರಾವಲಂಬಿಯೋ ಅಷ್ಟೇ ಪರಾವಲಂಬಿ ನಾನು. ಒಬ್ಬ ಸ್ತ್ರೀ ಬಹಳವಾದರೆ ಕೆಲವು ನಿಯಮಗಳನ್ನು

ಅನುಸರಿಸಿ ನಡೆಯಬಹುದು. ಉಣಿಸು, ತಿನಿಸು, ವಿಹಾರ, ಇವುಗಳಲ್ಲಿ ಕೆಲವು ನಿಯಮಗಳನ್ನು ಅನುಸರಿಸಬಹುದು. ಆದರೂ ಗರ್ಭಸ್ಥ ಭ್ರೂಣ ನೈಸರ್ಗಿಕವಾಗಿ ಬೆಳೆಯುತ್ತದೆ. ಅದರ ಮೇಲೆ ಅವಳ ಯಾವ ನಿಯಂತ್ರಣವೂ ಇಲ್ಲ. ಹೀಗೆ ಹಲವಾರು ಕಾರಣಗಳಿಂದ ನನ್ನ ಕೃತಿಗಳ ಸಂಖ್ಯೆಯೂ ಕಡಿಮೆಯಾಗಿದೆ. ಅದಕ್ಕಾಗಿ ನನಗೆ ವಿಷಾದವೂ ಇಲ್ಲ. ಒಂದು ಕೃತಿ ಹೊರಗೆ ಬಂದಾಗ ಅದರ ಜೊತೆ ನಾನೂ ಬೆಳೆಯುತ್ತೇನೆ. ನನಗೆ ಅದು ಯಾವುದೋ ಒಂದು ಬಗೆಯ ಸತ್ಯವನ್ನು ಅನುಭವಕ್ಕೆ ತಂದುಕೊಡುತ್ತದೆ. ಅದು ಸಹೃದಯರಿಗೆ ಕೊಡುವ ಅನುಭವ ಬೇರೆ ಇರಬಹುದು. ಸಹೃದಯ ಅದನ್ನು ನಿರಾಕರಿಸಬಹುದು. ಸಹೃದಯರದೂ ದೋಷವಿಲ್ಲ. ಕೃತಿಗೂ ಯಾವ ಕೊರತೆಯಿಲ್ಲ.

ನಿಮ್ಮ ಸೌಭಾಗ್ಯವತಿಯವರಿಗೆ ನನ್ನ ಶುಭಾಶಯಗಳು. ಕೆಲವು ತಿಂಗಳ ಹಿಂದೆ ನಿಮ್ಮ ತಾಯಿ ಬರೆದ ಒಂದು ಲೇಖನವನ್ನು ಸ್ನೇಹಿತರಿಂದ ಓದಿಸಿಕೊಂಡೆ. ನಾನು ಅಲ್ಲಿಯವರೆಗೆ ಅವರ ಬರೆಹಗಳನ್ನು ಕಂಡಿರಲೇ ಇಲ್ಲ. ಅವರಿಗೆ ನನ್ನ ವಂದನೆಗಳನ್ನು ತಿಳಿಸಬೇಕು. ತಮ್ಮ ತಂದೆಯವರ ಎಲ್ಲ ಕೃತಿಗಳನ್ನು ಓದಿದ್ದೇನೆ. ಅವರು ತಮ್ಮ ಕೃತಿಗಳಿಂದ ನನಗೆ ವಿಚಾರದ ಅನ್ನವನ್ನು ನೀಡಿದರು. ಗೌರೀಶರು ಈಗ ಇಲ್ಲ ಎಂದು ಭಾವಿಸಲಾರೆ.

ತಮ್ಮ ವಿಶ್ವಾಸದ<br>
**ವಸಂತ ದಿವಾನಜಿ**<br>
ಸೋಲಾಪುರ



# ಪುಸ್ತಕ ಪರಿಚಯ

ಗೆಳೆಯರೊಬ್ಬರು ಮಾತಿನ ನಡುವೆ ಕಾವ್ಯ ಪ್ರಕಾರಕ್ಕೆ ಈಗ ಒಂದು ರೀತಿಯ ಮಂಕು ಕವಿದಿದೆ. ಅದನ್ನು ಜನರ ಹತ್ತಿರ ಒಯ್ಯುವ ಕೆಲಸ ಸಾಧ್ಯವಾಗಬೇಕು. ಹೆಚ್ಚು ಜನ ಕಾವ್ಯವನ್ನು ಓದುವಂತಾಗಬೇಕು ಅನ್ನುವ ಮಾತು ಬಂತು. ಹಾಗೆ ನೋಡ ಹೊರಟರೆ ಕಾವ್ಯವನ್ನು ಆಸ್ವಾದಿಸುವ ಗಂಭೀರ ಓದುಗರ ಸಂಖ್ಯೆ ಯಾವತ್ತಿಗೂ ಕಡಿಮೆಯೇ ಸಿನಿಮಾ ಹಾಡು, ಲಘು ಸಂಗೀತಗಳಿಗೆ ಇರುವ ಪ್ರೇಕ್ಷಕರು ಶಾಸ್ತ್ರೀಯ ಸಂಗೀತದ ಮಾತಿಗೆ ಬಂದರೆ ಸಂಖ್ಯೆಯಲ್ಲಿ ಕಡಿಮೆಯೇ ಆದರೆ ಪ್ರತಿಯೊಬ್ಬನೂ ತನ್ನ ಓದುವ-ಬೆಳೆಯುವ ಪ್ರಕ್ರಿಯೆಯಲ್ಲಿ ಕಾವ್ಯ ಓದುವುದನ್ನೂ ರೂಢಿಸಿಕೊಳ್ಳುತ್ತಾ ಹಿಗ್ಗಿಸಿಕೊಳ್ಳುತ್ತಾ ಸಾಗಬೇಕಾಗಿದೆ. ಪ್ರತಿ ಓದೂ ಆಯಾ ಕಾಲಘಟ್ಟದಲ್ಲಿ ಮನಃಸ್ಥಿತಿಯಲ್ಲಿ ಬೇರೆಯದೇ ಆಗಿ ತೋರುತ್ತದೆ. ಕಾವ್ಯದ ಓದುವಿಕೆಗೆ ಒಂದು ತಯಾರಿ ಸಿದ್ಧತೆಯಂತೂ ಅಗತ್ಯವಾಗಿ ಬೇಕಾಗಿದೆ.

ಇನ್ನು ಪ್ರಕಟಣೆಯ ಮಾತಿಗೆ ಬಂದರೆ ಕಥೆ, ಕಾದಂಬರಿ, ವಿಮರ್ಶೆಗಳನ್ನು ಪ್ರಕಟಿಸುವಷ್ಟು ಸುಲಭವಾಗಿ ಕಾವ್ಯ ಪ್ರಕಟಣೆ ಸಾಧ್ಯವಿಲ್ಲ. ಹೆಸರಾಂತ ಪುಸ್ತಕದ ಅಂಗಡಿಗಳಲ್ಲಿ ಹೆಸರಾಂತ ಕವಿಗಳ ಸಂಗ್ರಹಗಳು ಮಾತ್ರ ದೊರಕಿದರೆ ಉಳಿದವರದ್ದು ಕಷ್ಟ ಕಷ್ಟ. ಮೈಸೂರಿನ ಒಬ್ಬ ಕವಿ ಬೆಂಗಳೂರಿನ ಓದುಗನಿಗೆ ತಲುಪುತ್ತಿಲ್ಲ, ಗೊತ್ತಿದ್ದರೂ ಎಟುಕಲಾರದ ಸ್ಥಿತಿ. ಉಳಿದ ಹಾಗೆ ಇನ್ನು ಕವಿಗಳು ಪ್ರಕಾಶಕರು ಸೇರಿಕೊಂಡು ರೂಪಿಸಿಕೊಂಡಿರುವ ಅಡ್ಡದಾರಿಗಳಂತೂ ನೂರಾರು. ಪ್ರಕಟಣೆಗೆ ಇಷ್ಟೆಲ್ಲಾ ತೊಂದರೆ ಇದ್ದರೂ ಪ್ರಕಟಗೊಳ್ಳುವ ಪುಸ್ತಕಗಳಲ್ಲಿ ಕವನ ಸಂಕಲನಗಳೇ ಹೆಚ್ಚು ಎನ್ನುವುದು ಏನನ್ನು ತೋರಿಸುತ್ತಿದೆ. ಕವಿತೆ ಬರೆಯುವವರ ಸಂಖ್ಯೆ ಹೆಚ್ಚಿದೆ ಪ್ರಕಟಿತ ಕವಿತೆಗಳ ವಿತರಣೆ ದಿಕ್ಕು ತಪ್ಪುತ್ತಿದೆ.

ನವ್ಯೋತ್ತರ ಕಾವ್ಯ ಭಾವಗೀತೆ ಕ್ಯಾಸೆಟ್ಟುಗಳ ಮೂಲಕ ಹೆಚ್ಚು ತಲುಪಿದ್ದು ಬಿಟ್ಟರೆ ನಮ್ಮಲ್ಲಿ ಒಳ್ಳೆಯ ಕವಿತೆಗಳನ್ನು ಓದುವುದಾಗಲಿ. ಅದನ್ನು ಕೇಳಿಸಿಕೊಳ್ಳುವ ಪರಿಪಾಠವಾಗಲಿ ಬೆಳೆದಿಲ್ಲ. ಕವಿಗೋಷ್ಠಿಗಳಂತೂ ನೀರಸವಾಗಿ ನಡೆಯುತ್ತವೆ. ಬಹುಪಾಲು ಕವಿಗಳಿಗೆ ತಮ್ಮ ಕವನಗಳನ್ನು ಜನ ಮುಟ್ಟುವ ಹಾಗೆ ಓದುವ ಕಲೆಯೇ ಗೊತ್ತಿಲ್ಲ. ಅದಕ್ಕೆ ಎಗ್ಗಿಲ್ಲದ ಮುಖದ ಬಿಗಿ ದಿಮಾಕಿನ ನಿಲುವು ಬೇರೆ. ಕವಿಗೋಷ್ಠಿ ಅಂದರೆ ಜನಕ್ಕೆ ಇಷ್ಟವಾಗುವುದೇ ಕಷ್ಟ

ಇಷ್ಟೆಲ್ಲಾ ವಿಚಾರಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಇವತ್ತಿನ ಕಾವ್ಯಾಭ್ಯಾಸಿಗಳ ಕವಿತೆಗಳ ಒಂದು ಸ್ಥೂಲ ಸಮೀಕ್ಷೆ ಈ ಲೇಖನ. ೨೦೦೪, ೨೦೦೫, ೨೦೦೬ರ ಸುಮಾರಿಗೆ ಪ್ರಕಟಗೊಂಡಿರುವ ಕೆಲವು ಕವನ ಸಂಕಲನಗಳ ಸಮೀಕ್ಷೆ ಮತ್ತು ಒಂದು ಸಮಗ್ರವಾದ ಓದು ಈ ಪ್ರಯತ್ನ. ಮೊದಲ ಹಂತದಲ್ಲಿ ನಮ್ಮ ಹಿರೀಕ ಕಾವ್ಯಾಭ್ಯಾಸಿಗಳ ಕವಿತೆಗಳನ್ನು ಕುರಿತು ಯಾವುದೇ ಪೂರ್ವಗ್ರಹ ಪ್ರಚೋದನೆಗಳಿಲ್ಲದ ಓದು. ಕವಿತೆಗಳನ್ನು ಕವಿತೆಗಳಾಗಷ್ಟೇ ಅರಿಯುವ ಪ್ರಯತ್ನ ಮಾಡಲಾಗಿದೆ. ಮುಂದಿನ ಸಂಚಿಕೆಯಲ್ಲಿ ಇನ್ನಷ್ಟು ಕವಿತೆಗಳ – ಕವಿಗಳ ಓದು.



**ಜಡ ಮತ್ತು ಚೇತನ**
ಲೇಖಕ:
ಸುಮತೀಂದ್ರ ನಾಡಿಗ
ಬೆಲೆ: **ರೂ. 60/-**
**ಪುಟ** : 95
ಪ್ರಕಾಶನ:
**ಸ್ವಪ್ನ ಬುಕ್ ಹೌಸ್**
ಬೆಂಗಳೂರು

ಸುಮತೀಂದ್ರ ನಾಡಿಗರ **ಜಡ ಮತ್ತು ಚೇತನ** ಕವನ ಸಂಕಲನ ಅವರ ಕಾವ್ಯ ಯಾನದ ಏಳನೆಯ ಸಂಕಲನ ಸುದೀರ್ಘ ಕಾಲದಿಂದ ಕಾವ್ಯಾಭ್ಯಾಸ - ಪ್ರಯೋಗ ಬೋಧನೆಯಲ್ಲಿ ತೊಡಗಿರುವ ನಾಡಿಗರು ತಮ್ಮ ಹೊಸ ಸಂಕಲನ ಈ ವಯಸ್ಸಿನಲ್ಲೂ ಉತ್ಸಾಹದಿಂದ ಪ್ರಕಟಿಸುತ್ತಿರುವುದು ಮೆಚ್ಚುಗೆ ಹುಟ್ಟಿಸುವ ಅಂಶ.

ನಾಡಿಗರ ಕಾವ್ಯದ ಬಗೆಗಿನ ಕಲ್ಪನೆಗಳು ಹಾಗೂ ಅವರ ನಂಬಿಕೆಗಳು ಅವರ ಕವಿತೆಯಲ್ಲಿ ಕಾಣ ಬರದೆ ಬರೀ ಅವರ ಹೇಳಿಕೆಯಾಗಿದೆ. ಇಡೀ ಸಂಕಲನದಲ್ಲಿ 'ಬನಲತಾ' ಕವಿತೆ ಬಿಟ್ಟರೆ ಉಳಿದವು ಮನಸ್ಸಿನಲ್ಲಿ ನಿಲ್ಲಬಲ್ಲ ರಚನೆಗಳೇ ಅಲ್ಲ.

ಗಿರೀಶ ಪುಟ್ಟಣ್ಣನವರ ಬಗ್ಗೆ ಮಹಾರಾಜ ಸಿಂಹಾಸನ ಅರಮನೆಗಳ ಬಗ್ಗೆ ನಾಡಿಗರು ಬರೆದಿದ್ದಾರೆ. ಅವು ಪತ್ರಿಕೆಗಳಲ್ಲಿ ಪ್ರಕಟಗೊಂಡಾಗಲೂ ಅದರ ಬಗ್ಗೆ ಜನಕ್ಕೆ ಒಂದು ರೀತಿಯ ಕುತೂಹಲ ವ್ಯಕ್ತವಾಗಿತ್ತು. ಒಬ್ಬ ಆರಂಭಿಕ ಹಂತದ ಕಾವ್ಯಾಭ್ಯಾಸಿ ಈ ರೀತಿಯ ವಸ್ತುಗಳನ್ನು ಆರಿಸಿಕೊಂಡು ರಾತ್ರಿ ಕಳೆದು ಬೆಳಗಾಗುವುದರಲ್ಲಿ ಜನಪ್ರಿಯನಾಗುವ ತಂತ್ರಗಳನ್ನು ಅನುಕರಿಸಬಹುದು. ಆದರೆ ನಾಡಿಗರಂಥ ಹಿರಿಯ ಕಾವ್ಯಾಭ್ಯಾಸಿಗಳ ದಾರಿ ಇದಲ್ಲ ಅನ್ನಿಸುತ್ತದೆ. ನಾಡಿಗ್ ಈ ಕವನಗಳು ಹುಟ್ಟಿಸಿದ ತಮ್ಮ ಜನಪ್ರಿಯತೆಯ ರೋಮಾಂಚನವನ್ನೂ ತಮ್ಮ ಮಾತುಗಳಲ್ಲಿ ಹಂಚಿಕೊಂಡಿದ್ದಾರೆ.

ಈ ಸಂಕಲನದ ಮುನ್ನುಡಿಯಲ್ಲಿ ಹರೀಶರು ನಾಡಿಗರ ಕಾವ್ಯದ ಬಗ್ಗೆ ನಡೆಯಿಸುವ ಉತ್ಸಾಹದ ಅಕಾಡೆಮಿಕ್ ಕಸರತ್ತು ವ್ಯರ್ಥವೆಂದೇ ತೋರುತ್ತದೆ. ಅವರು ಹೇಳುವಷ್ಟು ಕಸುವನ್ನಾಗಲೀ ಇವತ್ತಿನ ಯಾವುದೇ ಸವಾಲುಗಳನ್ನಾಗಲಿ ನಾಡಿಗರ ಕಾವ್ಯ ಇರುವುದನ್ನು ಎದುರುಗೊಳ್ಳುವುದಿಲ್ಲ.

ಹರೀಶ್ ಹೇಳುತ್ತಾರೆ — "ಹೊಸದಾಗಿ ಬರೆಯಲು ಹೊರಟಿರುವ ಮತ್ತು ಈಗಾಗಲೇ ಪತ್ರಿಕೆ ಕವಿಗೋಷ್ಠಿಗಳಲ್ಲಿ ಕಾಣಿಸಿಕೊಳ್ಳುತ್ತಿರುವ ತರುಣ ಕವಿಗಳಿಗೆ 'ಅಬ್ಬಬ್ಬ ತುಂಬಿರುವ' ಈ ಸಂಕಲನ ಮಾರ್ಗದರ್ಶನ ಮಾಡುವ ಯೋಗ್ಯತೆ ಹೊಂದಿದೆ."

ಬೇಂದ್ರೆಯವರ ಸಖೀಗೀತವನ್ನು ತಮ್ಮ ದಾಂಪತ್ಯಗೀತ ಅಖಾಡಕ್ಕಿಳಿದಿದೆ ಅಂತ ತಾವೇ ಘೋಷಿಸಿಕೊಂಡಿರುವ ನಾಡಿಗರು, ಅವರ ಪಂಚಭೂತಗಳು ಮತ್ತು ದಾಂಪತ್ಯಗೀತೆಗಳ ಹಿಂದಿರುವ ಪರಿಣತಿ ಮತ್ತು ವ್ಯುತ್ಪತ್ತಿ ತರುಣ ಕವಿಗಳಿಗೆ ಸಾಧ್ಯವಿಲ್ಲ ಅನ್ನುವ ಭವಿಷ್ಯ ನುಡಿಯುತ್ತಾರೆ. ಜೊತೆಗೆ ವಸ್ತುವಿನ ಆಯ್ಕೆ ಮತ್ತು ಆ ಆಯ್ಕೆಯ ರೀತಿಯ ಬಗ್ಗೆ ನಾಡಿಗರ ಜಡ ಮತ್ತು ಚೇತನ ಸಂಕಲನ ಈ ಹೊಸ ಕವಿಗಳಿಗೆ ಒಂದು ದಾರಿ ತೋರಿಸುತ್ತದೆ ಎನ್ನುವ ಮಾತುಗಳನ್ನು ಪೀಠಸ್ಥ ಮಠಾಧಿಪತಿಗಳನ್ನು ಮೀರಿಸುವ ಹಾಗೆ ಕಾವ್ಯ ರಚನೆಯ ಬಗ್ಗೆ ಕೊರೆದಿದ್ದಾರೆ. ಅಂಥದ್ದೊಂದು

ಆಸೆ ಇಟ್ಟುಕೊಂಡು ಓದ ಹೊರಟವರಿಗೆ ನಾಡಿಗರ ಸಂಕಲನ ಚೇತನವಿಲ್ಲದ 'ಜಡ'ವಾಗಿ ಕಾಣುವುದು ದುರಂತ. ನಾಡಿಗರ ಅಭಿಪ್ರಾಯಕ್ಕೆ ಭಿನ್ನವಾಗಿ ಗಟ್ಟಿಯಾಗಿ ಬರೆಯುತ್ತಿರುವ ತರುಣ ಕವಿಗಳ ಒಂದು ದೊಡ್ಡ ಗುಂಪೇ ಇದೆ. ಆದರೆ ಅದನ್ನು ಗಮನಿಸಬಲ್ಲ ವ್ಯವಧಾನ ಹಿರಿಯ ತಲೆಮಾರಿಗೆಲ್ಲಿದೆ. ನಾಡಿಗ್ ನಮ್ಮ ಮುಖ್ಯ ಕವಿಗಳಲ್ಲಿ ಒಬ್ಬರು ಯಾಕೆ ಆಗುವುದಿಲ್ಲ ಅನ್ನುವುದಕ್ಕೆ ಉತ್ತರ ಈ ಸಂಕಲನದಲ್ಲೇ ಇದೆ.

ಭಾವಗೀತೆಯ ದಾರಿ ಅಂತ ನಾಡಿಗ್, ಹರೀಶ್ ಇಬ್ಬರೂ ಹೇಳುತ್ತಾರೆ. ಭಾವಗೀತೆಯ ಲಕ್ಷಣಗಳಾಗಲಿ, ಲಾಲಿತ್ಯವಾಗಲಿ ನಾಡಿಗರ ಕವಿತೆಗಳು ತೋರಿಸುವುದಿಲ್ಲ.

★

**ಪದ್ಯಗಂಧ** ದೇಶ ಕುಲಕರ್ಣಿ ಅವರ ಆರನೆಯ ಕವಿತಾ ಸಂಕಲನ. ಕಾವ್ಯದಿಂದ ಹುಟ್ಟಬಹುದಾದ ಅಥವಾ ಪಡೆಯಬಹುದಾದ ಉಳಿದ ಯಾವುದೇ ರೀತಿಯ ಪ್ರಯೋಜನ, ಯಶಸ್ಸುಗಳ ಬಗ್ಗೆ ಒಂದು ರೀತಿಯ ಸಿನಿಕತನದ ಅಂತರ ಉಳಿಸಿಕೊಂಡು ಕಾವ್ಯದ ಪ್ರಯೋಜನ ಕಾವ್ಯವೇ ಅನ್ನುವ ನಂಬಿಕೆಯೊಂದಿಗೆ ಬರೆಯುತ್ತಿರುವವರು. ಈ ಸಂಕಲನದ ಇಪ್ಪತ್ತೈದು ಕವಿತೆಗಳಲ್ಲಿ ದೇಶಕುಲಕರ್ಣಿ ತಮ್ಮ ಯಾವತ್ತಿನ ನಿರುದ್ವಿಗ್ನ ಶೈಲಿಯಲ್ಲಿ ದೈನಿಕದ ಸಣ್ಣಪುಟ್ಟ ಘಟನೆಗಳನ್ನು ವಸ್ತುವಾಗಿರಿಸಿಕೊಂಡು ಅಚ್ಚುಕಟ್ಟಾದ ರಚನೆಗಳನ್ನಾಗಿ ಮಂಡಿಸುತ್ತಾರೆ. ಒಂದು ರೀತಿಯ ಎಚ್ಚರವುಳ್ಳ ಸೂಕ್ಷ್ಮ ಮನಸ್ಸಿನ ಕಾವ್ಯ ಕೌಶಲ್ಯ ಈ ಕವಿತೆಗಳಲ್ಲಿ ಎದ್ದು ಕಾಣುತ್ತದೆ. ಆದರೆ ಜೊತೆಗೆ ಸಾಮಾಜಿಕ ಪರಿಸ್ಥಿತಿ ಕವಿಯ ಹೊರಗಿನ ಜಗತ್ತಿನ ಚಲನೆ ಘರ್ಷಣೆಗಳಿಗೂ ಇಲ್ಲಿ ಜಾಗವಿದೆ. ಸ್ಪಂದನೆಯಿದೆ. ಕೆಎಸ್‌ನ, ಅಡಿಗ ಮೊದಲಾದ ತಮ್ಮ ಸರೀಕರ ಹಿರಿಯ ಕವಿಗಳ ಸಾಲುಗಳನ್ನೇ ಮುರಿದು ಇಲ್ಲಿನ ಅನೇಕ ಕವಿತೆಗಳಲ್ಲಿ ಹೊಸ ಅರ್ಥ ಮತ್ತು ಸಂದರ್ಭಗಳಿಗೆ ಸೂಕ್ತವಾಗುವಂತೆ ಪುನರ್ ರೂಪಿಸಲಾಗಿದೆ.

ಈ ಹಿಂದೆ ಓದಿದ ನಾಡಿಗರ ಸಂಕಲನದ ವಾಚಾಳಿತನವಾಗಲೀ ಅಥವಾ ಕ್ಲಿಷ್ಟವೆನ್ನಿಸುವ ಓದುವುದಕ್ಕೆ ಸವಾಲೆನ್ನಿಸುವ ಗೂಢಾರ್ಥ ಪ್ರತಿಮೆ ಕಾವ್ಯ ಶರೀರವನ್ನು ಹೊಂದಿದ ರಚನೆಗಳಾಗಲಿ ದೇಶಕುಲಕರ್ಣಿ ಅವರಲ್ಲಿ ಕಾಣಸಿಗುವುದಿಲ್ಲ. ನಾಡಿಗ್ ಮತ್ತು ಕೇಶ ಕುಲಕರ್ಣಿ ಇಬ್ಬರಲ್ಲೂ ಅವರವರ ತಾರುಣ್ಯದಲ್ಲಿ ಬರೆಯುತ್ತಿದ್ದಾಗಿನ ಲೈಂಗಿಕ ಗೀಳು ಈ ಸಂಕಲನಗಳಲ್ಲೂ ಮುಂದುವರೆದಿದೆ. ಸಾವು, ಸಾಮಾಜಿಕ ಹಿಂಸೆ, ಸಾಮಾಜಿಕ ದೊಂಬರಾಟಗಳ ಬಗ್ಗೆ ಅಸಹನೆ ಕಟು ಟೀಕೆಗಳಿವೆ.

ಹೊಸ ಶತಮಾನದ ಬಗ್ಗೆ ನಾಡಿಗ್ ಮತ್ತು ದೇಶ ಕುಲಕರ್ಣಿ ಇಬ್ಬರೂ ಬರೆದಿದ್ದಾರೆ. ನಾಡಿಗರದ್ದು ಉದ್ದನೆಯ ಹೇಳಿಕೆಯ ಹಾಗೆ ತೋರಿದರೆ ಹಿಂದೀ ಕವಿ ಚಂದ್ರಕಾಂತರ ಪ್ರೇರಣೆಯಿಂದ ಬರೆದ ದೇಶಕುಲಕರ್ಣಿ ಪದ್ಯ ಹೆಚ್ಚು ವಿಸ್ತಾರ ಹೊಂದಿ ಅನೇಕ ಅರ್ಥ ಸಾಧ್ಯತೆಗಳನ್ನು ಬಚ್ಚಿಟ್ಟುಕೊಂಡಿದೆ.



**ಪದ್ಯಗಂಧ**

ಲೇಖಕ:
**ದೇಶಕುಲಕರ್ಣಿ**
ಬೆಲೆ: **ರೂ. 60/-**
**ಪುಟ** : 60
ಪ್ರಕಾಶನ: **ದೇಶಕುಲಕರ್ಣಿ**

★

ನದೀ ತೀರದಲ್ಲಿ ಡಾ. ಹೆಚ್.ಎಸ್. ವೆಂಕಟೇಶಮೂರ್ತಿ ಅವರ ಹದಿನೈದನೇ ಕವಿತಾ ಸಂಕಲನ. ಒಬ್ಬ ಲೇಖಕನ ಬರವಣಿಗೆಯ ವಿಸ್ತಾರಕ್ಕೆ ಉದಾಹರಣೆಯಾಗಬಲ್ಲ ಅಪರೂಪದ ಕವಿ ಹೆಚ್‌ಎಸ್‌ವಿ. ನವ್ಯ ಮತ್ತು ನವ್ಯೋತ್ತರ ಲೇಖಕರು ವಿಪುಲವಾಗಿ ಬರೆಯುವುದು ಒಂದು ದೋಷ ಎಂದೇ ಮೌನವಾಗಿ ಪರಿಗಣಿಸಿದ್ದಂತೆ ತೋರುತ್ತದೆ. ಈ ಕುರಿತು ಎಲ್ಲೂ ಯಾರೂ ಬಾಯಿಬಿಟ್ಟು ಹೇಳಿಲ್ಲ. ಆದರೆ ಬರವಣಿಗೆ ಗಟ್ಟಿಯಾಗಿರಬೇಕು ಅಂತ ನವ್ಯ ಪೀಳಿಗೆ ಲೇಖಕರ ನಂಬಿಕೆಯಾದರೆ ಬರವಣಿಗೆಯನ್ನೇ ನೆಚ್ಚಿಕೊಂಡು ಬೇರೆ ಬೇರೆ ಪ್ರಯೋಗಗಳನ್ನು ಹೊಸ ಸಾಧ್ಯತೆಗಳನ್ನು ವಿಸ್ತರಿಸುವ ಹಂಬಲ ಅವರ ಮುಂದಿನ ಪೀಳಿಗೆಯ ಬಹುಪಾಲು ಲೇಖಕರು ತೋರಲಿಲ್ಲ. ಎಚ್‌ಎಸ್‌ವಿ ಆ ಮಟ್ಟಿಗೆ ಗೀತ ರಚನೆ, ನಾಟಕ, ಕವಿತೆ, ಮಹಾಕಾವ್ಯ, ಸಾಹಿತ್ಯವಿಮರ್ಶೆ ಮೊದಲಾದ ಎಲ್ಲ ಪ್ರಕಾರಗಳಲ್ಲಿ ತೊಡಗಿಕೊಂಡು ಬರೆದವರು. ವರ್ಷಕ್ಕೆ ಒಂದಾದರೂ ಪುಸ್ತಕವನ್ನು ಲೇಖಕರೆನ್ನಿಸಿಕೊಂಡವರು ಪ್ರಕಟಿಸಬೇಕೆನ್ನುವ ನಂಬಿಕೆ ಇಟ್ಟವರು. ಲೇಖನದ ವ್ಯವಸಾಯದ ದೃಷ್ಟಿಯಿಂದ ಇದೊಂದು ಆದರ್ಶದ ಮಾದರಿ. ಇದರ ಗುಣಮಟ್ಟ ನಿಲುವುಗಳ ಬಗ್ಗೆ ಅಭಿಪ್ರಾಯಗಳು ಚರ್ಚೆಗಳು ಏನೇ ಇದ್ದರೂ ಬರಹದ ಸಾತತ್ಯ  ವಿಸ್ತಾರ ಮತ್ತು ವ್ಯಾಪ್ತಿಯ ದೃಷ್ಟಿಯಿಂದ ಇದೊಂದು ಗಮನಾರ್ಹ ಅಂಶ.

ಇಲ್ಲಿನ ೪೬ ಕವಿತೆಗಳಲ್ಲಿ ಮತ್ತೆ ಎದ್ದು ಕಾಣುವುದು ದಟ್ಟವಾದ ಪ್ರತಿಮೆಗಳು ಮತ್ತು ಅಪಾರ ತಾಳ್ಮೆಯಿಂದ ಕೆತ್ತಿದ ಶಬ್ದ ಕುಸುರಿ, ವರ್ತಮಾನದ ಸವಾಲುಗಳಿಗಿಂತ ಮೂರ್ತಿಯವರ ಮುಖ್ಯ ಸ್ಪಂದನೆ, ಪುರಾಣಗಳ ಜೊತೆಗಿನ ಗೆಳೆತನದಲ್ಲಿ ಪರಂಪರೆಯ ಜೊತೆಗಿನ ಕೊಡುಕೊಳ್ಳುವಿಕೆಯಲ್ಲಿ.

ಮೇಲು ನೋಟಕ್ಕೆ ಒಗಟುಗಳ ಹಾಗೆ ಇಷ್ಟಿಷ್ಟೇ ಬಿಟ್ಟುಕೊಳ್ಳುವ ಮೂಲಕ ತೆರೆದುಕೊಳ್ಳುವ ಕವಿತೆಗಳು ಜಗ್ಗನಿಸುವ ಅನುಭವ ಹಿಡಿದು ನಿಲ್ಲಿಸುತ್ತವೆ. ಇದರ ಜೊತೆಗೆ ಎಚ್‌ಎಸ್‌ವಿ ಭಾಷೆಯನ್ನು ಮಿದುವಾಗಿಸಿ ಪೌರಾಣಿಕ ಪ್ರತಿಮೆಗಳನ್ನು ದಟ್ಟವಾಗಿ ಬಳಸಿಕೊಳ್ಳುವುದು ಓದಲು ಖುಷಿ ನೀಡುತ್ತದೆ.

ನಾಡಿಗ್ ಕವಿತೆಗಳ ಬಗ್ಗೆ ತಮ್ಮ ಮುನ್ನುಡಿಯಲ್ಲಿ ಉಪದೇಶಿಸಿದ್ದನ್ನು ಒಂದೂ ಮಾತಾಡದೆ ತಮ್ಮ ಕವನಗಳಲ್ಲಿ ಎಚ್‌ಎಸ್‌ವಿ ಹಿಡಿಸಿಟ್ಟಿದ್ದಾರೆ. ಅಪ್ಪಟ ಕನ್ನಡ ನುಡಿಗಟ್ಟುಗಳಲ್ಲಿ ಭಾವಗೀತಾತ್ಮಕ ರಸವನ್ನು ಎಂದೂ ಕೆಡದ ಹಾಗೆ ಜತನದಿಂದ ರೂಪಿಸಿದ್ದಾರೆ. ಈ ಸಂಕಲನದ ವಿನ್ಯಾಸ, ಮುದ್ರಣ ಮತ್ತು ಸೃಜನ ಅವರ ರೇಖಾ ಚಿತ್ರಗಳು ಇಲ್ಲಿನ ಕವಿತೆಗಳಿಗೆ ಪೂರಕವಾಗಿ ಸಂವಹನದಲ್ಲಿ ಯಶಸ್ಸು ಸಾಧಿಸುವಲ್ಲಿ ನೆರವಾಗಿವೆ.



**ನದೀತೀರದಲ್ಲಿ**

ಲೇಖಕ:
ಹೆಚ್.ಎಸ್.
ವೆಂಕಟೇಶಮೂರ್ತಿ
ಬೆಲೆ: **ರೂ. 60/-**
**ಪುಟ : 108**
ಪ್ರಕಾಶನ: **ಅಂಕಿತ ಪುಸ್ತಕ,**
ಬೆಂಗಳೂರು

★

**ಮತ್ತೆ ಮತ್ತೆ**, ಹೆಚ್.ಎಸ್. ಶಿವಪ್ರಕಾಶರ ಹೊಸ ಕವಿತೆಗಳ ಸಂಕಲನ ನಮ್ಮ ಕಾವ್ಯ ಸಂದರ್ಭದ ಮುಖ್ಯ ಕಾವ್ಯಾಭ್ಯಾಸಿಗಳಲ್ಲಿ ಒಬ್ಬರಾದ ಶಿವಪ್ರಕಾಶರ ಕವಿತೆಗಳ ಓದು ಯಾವತ್ತಿಗೂ ಖುಷಿ, ಕುತೂಹಲಗಳನ್ನು ಉಳಿಸಿಕೊಳ್ಳುತ್ತವೆ. ಈ ಸಂಕಲನದಲ್ಲಿ ಮೂರು ಭಾಗಗಳಲ್ಲಿ ಕವಿತೆಗಳನ್ನು ವಿಂಗಡಿಸಲಾಗಿದೆ. ಮೊದಲ ಭಾಗಹದಲ್ಲಿ 'ಅಲ್ಲಿ-ಇಲ್ಲಿ' ಕವಿಯ ಅಮೆರಿಕದ ಭೇಟಿಯ ಹಿನ್ನೆಲೆಯಲ್ಲಿ ರೂಪುಗೊಂಡ ಹಳಹಳಿಕೆ ನೆನಪುಗಳು ಮತ್ತು ಅಮೆರಿಕೆಯ ಸಾಮ್ರಾಜ್ಯಶಾಹಿತನದ ಬಗ್ಗೆ ಇರುವ ವಿರೋಧ ಇವುಗಳೆಲ್ಲ ಏಕತ್ರ ಕೇವಲ ಮೂರು ಕವನಗಳಲ್ಲಿ ಬೆಳಕು ಕಂಡಿವೆ. ಮತ್ತೆ ಮತ್ತೆ ಶಿವಪ್ರಕಾಶರ ಹಿಂದಿನದನ್ನು ಇಂದಿಗೆ ಪ್ರಸ್ತುತಗೊಳಿಸಿಕೊಳ್ಳುವ ಗುಣ ಎದ್ದು ಕಾಣುತ್ತದೆ. ಎರಡನೆಯ 'ಅವಂತಿಕಾ' ಭಾಗದಲ್ಲಿರುವ 'ಅವಂತಿಕಾ' ಎಂಬ ದೀರ್ಘವಾದ ರಚನೆ ಇವತ್ತಿನ ಅನೇಕ ಜಿಕ್ಕಟ್ಟು ಆತಂಕಗಳ ವಿವಿಧ ಮಗ್ಗುಲುಗಳನ್ನು ವಿವರವಾಗಿ ತೀವ್ರವಾಗಿ ಬಿಡಿಸಿಡುತ್ತದೆ. ಚಿಕ್ಕಚಿಕ್ಕ ಕವಿತೆಗಳನ್ನು ಓದಿ ದಣಿದ ಕಣ್ಣುಗಳಿಗೆ ಮನಸ್ಸಿಗೆ ಈ ಕವಿತೆ ಹೊಸ ಅನುಭವ ನೀಡುತ್ತದೆ. ಇಡೀ ಕವಿತೆಯಲ್ಲಿ ನೆನಪು ವಿರಹ ಮತ್ತು ಆಧ್ಯಾತ್ಮಿಕ ಸೆಳೆಕುಗಳು ಇಡುಕಿರಿದಿವೆ.

ಮಳೆಯ ಬೇಸಿಗೆ ಈ ಸಂಕಲನದ ಮೂರನೆಯ ಭಾಗ. ಇಲ್ಲಿ ಸಣ್ಣ ಸಣ್ಣ ಕವಿತೆಗಳು ಮುದನೀಡುತ್ತವೆ. ಶಿವಪ್ರಕಾಶರ ಕವನಗಳಲ್ಲಿ ಎದ್ದು ಕಾಣುವ ಗುಣ ಅವರ ಆರ್ತತೆ. ವಸ್ತುವಿನೊಳಗೆ ಆ ಕವಿಯ ನೋಯುವಿಕೆ ಮೊರೆ ನಮ್ಮದು ಅಂತ ಅನ್ನಿಸುವ ಹಾಗೆ ಕಾಡುತ್ತದೆ.

ವರ್ತಮಾನದ ಎಲ್ಲ ದಿಗಿಲುಗಳನ್ನು ತನ್ನೊಳಗೆ ಹಿಡಿದಿಟ್ಟುಕೊಂಡಿರುವ ಈ ಕವಿತೆಗಳು ಮತ್ತೆ ಮತ್ತೆ ಕಾಡುತ್ತವೆ. ನಮ್ಮ ಓದಿಗೆ ಓದಿನ ಮುದಕ್ಕೆ ತೆರೆದುಕೊಳ್ಳುತ್ತಲೇ ಇರುತ್ತದೆ.

ಇಲ್ಲಿ ಸೇರಿಸಿರುವ ಶಿವಪ್ರಕಾಶರ ವಚನಗಳು ಪಾಯಸದಲ್ಲಿ ಕಲ್ಲು ಸಿಕ್ಕ ಹಾಗೆ ಕೃತಕವಾಗಿ ತೋರುತ್ತವೆ. ಒಟ್ಟು ಕವಿತೆಗಳ ಸಂಖ್ಯೆ ಕೂಡ ಕಡಿಮೆ ಅಂತ ಅವರ ಕಾವ್ಯದ ಓದುಗರಿಗೆ ಅತೃಪ್ತಿ ಉಂಟುಮಾಡುತ್ತದೆ.

ಶಿವಪ್ರಕಾಶಕರನ್ನು ಕಾಡುವ ನಗರಗಳು, ಪುರಾಣಗಳು, ಸ್ವಪ್ನಗಳು, ಹೆಣ್ಣುಗಳು ಮತ್ತು ಜೋಗಿ ಜಂಗಮರು, ನೊಂದ ಬಡಜನರು ನಮ್ಮನ್ನು ಕಾಡುತ್ತಿರಲಿ ಮತ್ತೆ ಮತ್ತೆ, ಕವಿತೆಗಳಾಗಿ ಮತ್ತೆ ಮತ್ತೆ.

– ಡಿ.ವಿ. ಪ್ರಹ್ಲಾದ್



**ಮತ್ತೆ ಮತ್ತೆ**
ಲೇಖಕ:
**ಹೆಚ್.ಎಸ್. ಶಿವಪ್ರಕಾಶ್**
ಬೆಲೆ: **ರೂ. 60/-**
**ಪುಟ : 100**
ಪ್ರಕಾಶನ: **ಕನ್ನಡ ಸಂಘ,**
ಕ್ರೈಸ್ಟ್ ಕಾಲೇಜು




# ಪ್ರತಿಕ್ರಿಯೆ

✦

ಸಂಚಯದ ಜುಲೈ ೨೦೦೫ರ ಸಂಚಿಕೆಯಲ್ಲಿ ಪ್ರಕಟವಾದ ಜಿ.ಬಿ. ಹರೀಶರ ಲೇಖನ ವಿಮರ್ಶೆಯ ಪರಂಪರೆಯನ್ನು ಮುಂದೊಯ್ಯುವ ಒಂದು ಪ್ರಯತ್ನ. ಪ್ರಯತ್ನವೇನೋ ಒಳ್ಳೆಯದೇ. ಆದರೆ ಡಿ.ಆರ್. ನಾಗರಾಜರಂಥ ಒಬ್ಬ ಬಹು ಪ್ರಸಿದ್ಧ ವಿದ್ವಾಂಸರನ್ನು ಎದುರು ಹಾಕಿಕೊಳ್ಳುವಾಗ ಎಚ್ಚರಿಕೆ ಅವಶ್ಯಕ. ದೊಡ್ಡ ವ್ಯಕ್ತಿಯನ್ನು ವಿಮರ್ಶಿಸಬಾರದು ಎಂದಲ್ಲ. ಆದರೆ, ಆ ವಿಮರ್ಶೆ ತನ್ನ ಘನತೆಯನ್ನು ಉಳಿಸಿಕೊಳ್ಳಬೇಕು. ಹಾಗೆ ನೋಡಿದರೆ ಹರೀಶರು ಎತ್ತಿ ತೋರಿಸುವ ಕೆಲವೊಂದು ನಾಗರಾಜರ ತಪ್ಪುಗಳು ಅವಶ್ಯವಾಗಿ ಚರ್ಚಿಸಬೇಕಾದಂಥ ವಿಚಾರಗಳು. ಇಪ್ಪತ್ತನೇ ಶತಮಾನದಲ್ಲಿ ಭಾರತದ ಸಮಾಜವಿಜ್ಞಾನ ಕ್ಷೇತ್ರದಲ್ಲಿ ಹೆಚ್ಚಿನ ಸಾಧನೆ ಮಾಡದೆ ಇರುವುದಕ್ಕೆ ಬಹು ಮುಖ್ಯ ಕಾರಣಗಳು ಜಾತಿ ಮತ್ತು ಭಾಷಾ ರಾಜಕೀಯ. ಹರೀಶ್ ಈ ಸಮಸ್ಯೆಯನ್ನು ಸರಿಯಾಗಿ ಗುರುತಿಸುತ್ತಾರೆ. ಆದರೆ ಅದನ್ನು ವಿಶ್ಲೇಷಿಸುವಲ್ಲಿ ಮಾತ್ರ ಕೊಂಚ ಎಡವುತ್ತಾರೆ. ತಾವು ತೋರಿಸುವ ತಪ್ಪುಗಳನ್ನು ಸ್ವತಃ ತಾವೇ ಎಸಗುತ್ತಾರೆ.

ಒಬ್ಬ ಸಂಶೋಧಕ ತನ್ನ ಪೂರ್ವಪಕ್ಷವನ್ನು ತರಾಟೆಗೆ ತೆಗೆದುಕೊಳ್ಳುವಾಗ ಅದಕ್ಕೆ ಸಂಪೂರ್ಣ ಮರ್ಯಾದೆ ಕೊಡುವುದು ಸಂಶೋಧನ ಲೇಖನದ ಶಿಸ್ತಿನ ಪ್ರಶ್ನೆ. ಹರೀಶ್ ಈ ತಪ್ಪು ಲೇಖನದಲ್ಲಿ ಪದೇಪದೇ ಮಾಡುತ್ತಾರೆ. ಅವರು ಈ ಕೆಲ ಅಸಭ್ಯ ಮಾತುಗಳನ್ನು ಬಳಸುವುದು ವಿಮರ್ಶೆ/ವಿಮರ್ಶಕನ ಘನತೆಗೆ ಒಪ್ಪುವುದಿಲ್ಲ: 'ಗಾಳಿ ಹಾಕುವ ಕೆಲಸ'; 'ನಂತರದ ಅಯೋಗ್ಯ ವಿಮರ್ಶೆಯಿಂದಾಗಿ'; 'ಹುಂಬ ವಿಮರ್ಶೆ ಬರೆಯುತ್ತಿರುವ ಆಶೀಶ್ ನಂದಿ'; 'ಶಿವ ವಿಶ್ವನಾಥನ್, ಕೆಲವೊಮ್ಮೆ ಗಾಳಿಗೋಪುರದಂಥ ಮಾತನ್ನಾಡಿದರೂ'; 'ಉಡಾಫೆ ಧೋರಣೆ'; 'ಕೊಂಕುತನವೇ ಕಾರಣ'; 'ರಂಧ್ರ ಹುಡುಕುವ ಬುದ್ಧಿ'; 'ಹೊಣೆಗೇಡಿ ವಿಮರ್ಶೆ' ಇತ್ಯಾದಿ. ಈ ಭಾಷೆ ಹರೀಶರ ಸಿಟ್ಟನ್ನು ತೋರಿಸುತ್ತದೆಯೆ ಹೊರತು ಅವರ ವಿಚಾರಗಳನ್ನಲ್ಲ. ಒಂದು ಉತ್ತಮ ಲೇಖನ ತನ್ನ ಹಿಡಿತವನ್ನು ಕಳೆದುಕೊಳ್ಳುವ ದುರ್ಬಲ ಕ್ಷಣಗಳಿವು.

ಸಮಸ್ಯೆ ಬರಿ ಭಾಷೆಯದಷ್ಟೇ ಅಲ್ಲ. ನಾಗರಾಜರ ಬರಹದಲ್ಲಿ 'ಪರಿಕಲ್ಪನೆ ಪದಗಳನ್ನು ವಿವರಿಸದಿರುವುದು' ಒಂದು ತಪ್ಪು ಎಂದು ಎತ್ತಿ ತೋರಿಸುವ ಹರೀಶರು ತಮ್ಮ ಲೇಖನದುದ್ದಕ್ಕೂ ಮಾಡುವುದು ಮತ್ತೆ ಅದೇ ತಪ್ಪನ್ನು. ತಮ್ಮ ಹಲವು ಆಕ್ಷೇಪಣೆಗಳಿಗೆ ಹರೀಶರು ಯಾವ ರೀತಿಯ ಸಮರ್ಥನೆಯನ್ನೂ ಕೊಟ್ಟುಕೊಳ್ಳುವುದಿಲ್ಲ. ಕೆಲ ಉದಾಹರಣೆಗಳು: ಕ್ಲಿಯಾಂತ್ ಬ್ರೂಕ್ಸ್ ನಂತರದ ವಿಮರ್ಶೆ ಅಯೋಗ್ಯ ಯಾಕೆ? ಆಶೀಶ್ ನಂದಿಯವರ ವಿಮರ್ಶೆ ಯಾಕೆ ಹುಂಬ? ಎಲ್ಲಿ ಮತ್ತು

ಯಾವ ರೀತಿಯಲ್ಲಿ ಶಿವವಿಶ್ವನಾಥರ ಮಾತುಗಳು ಗಾಳಿಗೋಪುರವಾಗುತ್ತದೆ? ಈ ಎಲ್ಲ ವಿಚಾರಗಳನ್ನು ಒಬ್ಬ ಲೇಖಕ ತನ್ನ ಲೇಖನದಲ್ಲಿ ವಿವರಿಸಿಕೊಂಡೇ ಮುಂದೆ ಹೋಗಬೇಕು ಎಂದೇನೂ ಅಲ್ಲ. ಆದರೆ ಈ ಮಾತುಗಳನ್ನು ಯಾವ ಆಧಾರದ ಮೇಲೆ ಒಬ್ಬ ವಿಮರ್ಶಕ ಹೇಳುತ್ತಿದ್ದಾನೆ ಎಂದು ಸೂಚಿಸುವುದು ಮಾತ್ರ ಅವಶ್ಯಕ. ಈಗಾಗಲೇ ಯಾರಾದರೂ ಇದನ್ನು ವಿವರಿಸಿ ತೋರಿಸಿದ್ದಲ್ಲಿ ಅವರ ಲೇಖನ/ಗ್ರಂಥಗಳನ್ನು ಉಲ್ಲೇಖಿಸಬೇಕು. ನಾಗರಾಜರು ಯಾವ ಕೆಲಸ ಮಾಡಲಿಲ್ಲವೋ ಹರೀಶರೂ ಅದನ್ನು ಮಾಡುವುದಿಲ್ಲ. "open form of criticism' ಎಂಬ ಪರಿಕಲ್ಪನೆಯನ್ನು ಹರೀಶರು ವಿವರಿಸದೆ ಹಾಗೇ ಬಳಸಿಕೊಳ್ಳುತ್ತಾರೆ. ಸಮಸ್ಯೆ ಇಲ್ಲಿಗೆ ನಿಲ್ಲುವುದಿಲ್ಲ. ನಾಗರಾಜರು ಪರಿಕಲ್ಪನೆಗಳನ್ನು ವಿವರಿಸದೆ ಬಳಸಿಕೊಳ್ಳುತ್ತಾರೆ ಎನ್ನುವುದು ಅವರ ವಿದ್ವತ್ತಿನ ಬಗ್ಗೆ ಎತ್ತುವ ಪ್ರಶ್ನೆಯಲ್ಲವಾದ್ದರಿಂದ, ಇದು ಅವರ ಬರವಣಿಗೆಯ ಶೈಲಿ ಚೆನ್ನಾಗಿರಲಿಲ್ಲ ಎನ್ನುವುದಕ್ಕಿಂತ ಹೆಚ್ಚಿನದೇನನ್ನೂ ಹೇಳುವುದಿಲ್ಲ. ಆದ್ದರಿಂದ ಈ ಆಕ್ಷೇಪಣೆಯ ಮೇಲೆ ಹರೀಶರು ವ್ಯರ್ಥ ಸಮಯ ಕಳೆದಿದ್ದಾರೆ ಎಂದೇ ನನ್ನ ಅನಿಸಿಕೆ.

ಬೌದ್ಧರ ಮತ್ತು ವೈದಿಕ ಚಿಂತನೆಗಳಿಗೆ ಸಾಮ್ಯತೆ ಇದೆ ಎಂದು ಹರೀಶರು ಹೇಳುವುದು ಮಾತ್ರ ಕುತೂಹಲ ಹುಟ್ಟಿಸುವ, ಮತ್ತು ಹೆಚ್ಚು ಚರ್ಚಿಸಬೇಕಾಗಿದ್ದ ವಿಚಾರ. ಈ ಎರಡೂ ಚಿಂತನೆಗಳು ಬದ್ಧ ವಿರೋಧಿಗಳೆಂದು ನಾಗರಾಜರಂತೆ ಭಾವಿಸಿರುವವರ ಸಂಖ್ಯೆಯೇ ಹೆಚ್ಚು ಇಂದು. ಆದರೆ ಇಷ್ಟೊಂದು ಘನವಾದ ವಿಚಾರವನ್ನು ಹರೀಶರು ಬಹಳ ಸುಲಭದಲ್ಲಿ, ಎರಡು ಪುಟಗಳಲ್ಲಿ ಚರ್ಚಿಸಿ ನಿರ್ಣಯಕ್ಕೆ ಬಂದುಬಿಡುವುದು ಮಾತ್ರ ಅಸಮಾಧಾನಕರ ವಿಷಯ. ಬೌದ್ಧ ಚಿಂತನೆಯನ್ನು ನಾಗರಾಜರು ಕಾವ್ಯ ತತ್ವ ಚಿಂತನೆಗೆ ಬಳಸಿಕೊಳ್ಳುವುದರ ವಿರುದ್ಧ ಆಕ್ಷೇಪಣೆ ಎತ್ತುವಾಗ ಹರೀಶ್ ಮತ್ತೆ ಅವಸರಪಡುತ್ತಾರೆ. ಎರಡು-ಮೂರು ಪುಟಗಳ ಚರ್ಚೆ ಮುಗಿಯುವುದರೊಳಗೆ ಒಂದು ಮಹತ್ತರ ವಿಷಯದ ಬಗ್ಗೆ ನಿರ್ಣಯಕ್ಕೆ ಬರುವುದು ಅನುಮಾನಕ್ಕೆಡೆ ಮಾಡಿ ಕೊಡುತ್ತದೆ. ಅಷ್ಟೇ ಅಲ್ಲ, ನಾಗರಾಜರ ವಿರುದ್ಧ ಅಷ್ಟೆಲ್ಲಾ ಆಕ್ಷೇಪಣೆಗಳನ್ನು ಮಾಡುವ ಹರೀಶರು ಇನ್ನುಳಿದ ಎಲ್ಲಾ ಲೇಖಕರ ಬರಹಗಳನ್ನು ಬಹಳ ಸುಲಭದಲ್ಲಿ, ಯಾವ ಸಮರ್ಥನೆ ಕೊಟ್ಟುಕೊಳ್ಳದೆ, ಒಪ್ಪಿಕೊಂಡುಬಿಡುತ್ತಾರೆ.

ಇದೆಲ್ಲದರ ಪರಿಣಾಮವಾಗಿ, ಇಡಿಯ ಲೇಖನದಲ್ಲಿ ನಾಗರಾಜರು ಒಬ್ಬ ವ್ಯಕ್ತಿಯಾಗಿ ತಪ್ಪು ಮಾಡಿದ ಹಾಗೆ ಕಾಣುತ್ತದೆ. ಇದು ಬಹಳ ಉಪಯುಕ್ತಕಾರಿ ವಿಮರ್ಶೆಯೇನೂ ಅಲ್ಲ. ಒಂದು ಸಂಶೋಧನೆ, ಒಂದು ವಿಮರ್ಶಾ ಸಂಪ್ರದಾಯ ಎಷ್ಟರಮಟ್ಟಿಗೆ ಒಬ್ಬ ವ್ಯಕ್ತಿಯ ವೈಯಕ್ತಿಕ ಸಾಧನೆಯೋ, ಅದಕ್ಕಿಂತ ಹೆಚ್ಚಾಗಿ ಅದು ಒಂದು ಸಂಸ್ಕೃತಿಯ, ಒಂದು ಸಮಾಜದ ಸಾಧನೆ ಕೂಡ. ಆದ್ದರಿಂದ ಒಬ್ಬ ವಿಮರ್ಶಕನನ್ನು, ಆತನ/ಆಕೆಯ ಸಂಪ್ರದಾಯದಿಂದ ಬೇರ್ಪಡಿಸಿ ವಿಮರ್ಶಿಸುವುದು ಸರಿಯಲ್ಲ. ಹೇಗೆ ಒಂದು ವಿಮರ್ಶಾ ಸಂಪ್ರದಾಯ ಒಂದು ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವಲ್ಲಿ ಎಡವಿದೆ ಎಂದು ತೋರಿಸುವುದು ಇಂದಿನ ಅವಶ್ಯಕತೆ. ಅಂದರೆ, ನಾಗರಾಜರು ತಪ್ಪು ಮಾಡುತ್ತಾರೆ ಎಂದು ಹೇಳುವುದಕ್ಕಿಂತ, ಯಾಕೆ ಆ ತಪ್ಪುಗಳನ್ನು ಮಾಡುತ್ತಾರೆ ಎಂದು ಹೇಳುವುದು ಮುಖ್ಯವಾಗುತ್ತದೆ. ಆದರೆ ಈ 'ಯಾಕೆ?' ಪ್ರಶ್ನೆಯನ್ನು ಉತ್ತರಿಸುವಾಗ ಒಬ್ಬ ವ್ಯಕ್ತಿಯನ್ನು ದೂರಿದರೆ ಏನನ್ನೂ ಹೇಳಿದ ಹಾಗಾಗುವುದಿಲ್ಲ.

ಒಂದು ಉತ್ತಮ ಲೇಖನ ಈ ಕೆಲವೊಂದು ಸಣ್ಣ ಪುಟ್ಟ ಸಮಸ್ಯೆಗಳಿಂದಾಗಿ ಬಹಳ ಸೊರಗಿದೆ.

**ಡನ್‌ಕಿನ್ ಜಳಕಿ, ಬೆಂಗಳೂರು**



**ಸಂ**ಚಯ ತಲುಪಿದೆ. ಧನ್ಯವಾದಗಳು. ವಿಮರ್ಶೆ ಕ್ಲಿಷ್ಟವಾಗಿರಬಹುದು, ಆದರೆ ಬರಹಗಳೇ ಕ್ಲಿಷ್ಟವಾದರೆ... ಓದುವುದು ಹೇಗೆ? ಅರ್ಥಮಾಡಿಕೊಳ್ಳುವುದು ಹೇಗೆ? ಓದಲು ತರಬೇತಿ ಬೇಕು, ಅರ್ಥ, ಅಧ್ಯಯನ ಬೇಕು ಎನ್ನುವುದು ಒಂದು ವಾದ. ಏನೆಲ್ಲಾ ಒಮ್ಮುಖಿ ವಾದಗಳಿಂದ ಹೊಸ ಓದುಗರು ಹುಟ್ಟುತ್ತಿಲ್ಲ ಎನ್ನುವ ವಾಸ್ತವವನ್ನು ಕನ್ನಡ ಬರಹಗಾರರು ಒಪ್ಪುವರೇ? 'ವಿಮರ್ಶೆಯ ಸುತ್ತ' ಓದಿ ಅನಿಸಿದ ವಿಚಾರ.

**ಪೂರ್ಣಪ್ರಜ್ಞ, ಬೇಳೂರು, ಸಾಗರ**



**ಸಂ**ಚಯದ ೭೭ನೇ ಸಂಚಿಕೆ ಓದಿ ತುಂಬಾ ಸಂತೋಷವಾಯಿತು. ಡಿ.ಆರ್. ನಾಗರಾಜರ ವಿಮರ್ಶೆಗಳ ಬಗ್ಗೆ ಹರೀಶರು ಬರೆದ ಲೇಖನ ತುಂಬಾ ಚೆನ್ನಾಗಿದೆ. ಹಾಗೇ ಅಡಿಗರ ಬಗ್ಗೆ ಜಿ.ಎಚ್. ನಾಯಕರ ಲೇಖನ, ವಿಜಯಶಂಕರರ 'ಒಳದನಿ'ಯ ವಿಮರ್ಶೆ, ಒಡಲಾಳ ಕುರಿತ ಲೇಖನ ಇಷ್ಟವಾದವು. ಅಭಿನಂದನೆ.

**ಬಿ.ವಿ. ಕೆದಿಲಾಯ, ಬೆಂಗಳೂರು**



**ಸಂ**ಚಯದ ೭೭ನೇ ಸಂಚಿಕೆ ತಲುಪಿದೆ. ಮುಖಪುಟ ತುಂಬಾ ಚೆನ್ನಾಗಿದೆ. ಕಪ್ಪು ಬಣ್ಣದ ಬಿಳಿಗೆರೆಯ ಎಲ್ಲ ಪುಟಗಳೂ ತುಂಬಾ ಚೆನ್ನಾಗಿವೆ ಆದರೆ ಸಾಲದು. ಸೃಜನ್ ಮತ್ತು ವಾಸುದೇವರ ಚಿತ್ರಗಳು ಮನಸ್ಸಿಗೆ ಕಿಕ್ ನೀಡುತ್ತವೆ.

ನಿಮ್ಮ ಮನಸ್ಸು ಮೊದಲೇ ಸೂಕ್ಷ್ಮ. ಈಗ ಇನ್ನೂ ಸೂಕ್ಷ್ಮವಾಗಿದೆ. ಈ ಬಾರಿಯ ಹೊಳೆದದ್ದು ತಾರೆ, ಉಳಿದಿದ್ದು ಆಕಾಶ ಬಹಳ ಸೂಕ್ಷ್ಮ ಬರೆಹವಾಗಿದೆ. ಬಹುಗುಣ ಸುಂದರ ಲಾಲ್‌ರ ಬಗ್ಗೆ ಬರೆಯುತ್ತ ಯಮುನೆ ಹರಿಯುವುದು ಬರೀ ನನಗೊಬ್ಬನಿಗಾಗಿ ಅಲ್ಲ ಎಂದು ಗಾಂಧಿ ಹೇಳಿದ್ದು ಅವರೊಬ್ಬ ದಾರ್ಶನಿಕ ಎಂಬುದನ್ನು ತೋರುವುದಿಲ್ಲವೇ?

ಜಿಡ್ಡು ಕೃಷ್ಣಮೂರ್ತಿ ಅವರ ಬರೆಹವೂ ಚೆನ್ನಾಗಿದೆ. ಒಟ್ಟಾರೆ ಸಂಚಯ ಚೆನ್ನಾಗಿ ಬಂದಿದೆ.

**ಬಂದಗದ್ದೆ ರಾಧಾಕೃಷ್ಣ, ಕೆಳದಿ, ಸಾಗರ**

# ಸಂಚಯದ ಪ್ರಕಟಣೆಗಳು










| ಕ್ರ. | ಪುಸ್ತಕ | ಲೇಖಕರು | ಬೆಲೆ |
|---|---|---|---|
| 1) | ಗಾಜು (ಕವಿತೆಗಳು) | ವಿವಿಧ ಕವಿಗಳು | ರೂ. 8-00* |
| 2) | ಎ.ಕೆ. ರಾಮಾನುಜನ್ ಹೆಜ್ಜೆ ಗುರುತು | ವಿವಿಧ ಲೇಖಕರು | ರೂ. 15-00* |
| 3) | ಸಿಕಾಡ (ಕವನ ಸಂಕಲನ) | ಜಿ. ಕೆ. ರವೀಂದ್ರಕುಮಾರ್ | ರೂ. 35-00* |
| 4) | ಡ್ರೀಮರ್ (ಕವಿತೆಗಳು) | ಡಿ. ವಿ. ಪ್ರಹ್ಲಾದ್ | ರೂ. 18-00 |
| 5) | ಅಭಿಮುಖಿ (ಲೇಖನಗಳು) | ಎನ್.ಎಸ್. ಶ್ರೀಧರಮೂರ್ತಿ | ರೂ. 20-00* |
| 6) | ಬಗೆ ತೆರೆದ ಬಾನು (ಸಂದರ್ಶನಗಳು) | ಸಂ. ಡಿ. ವಿ. ಪ್ರಹ್ಲಾದ್ | ರೂ. 60-00 |
| 7) | ಚೌಕಟ್ಟು (ದೃಶ್ಯಕಲೆ ಕುರಿತು) | ಸಂ. ಎಚ್.ಎ.ಅನಿಲ್‌ಕುಮಾರ್ | ರೂ. 25-00 |
| 8) | ಮೌನದ ಹೊತ್ತು (ಅನುವಾದಿತ ಕವಿತೆಗಳು) | ಸು. ರಂ. ಎಕ್ಕುಂಡಿ | ರೂ. 20-00 |
| 9) | ಕನಸು ಕೋಳಿಯ ಕತ್ತು (ಕವನಗಳು) | ಗೋವಿಂದ ಹೆಗಡೆ | ರೂ. 30-00 |
| 10) | ನಾಟಕ ಅಂತರಂಗ | ಎ.ಆರ್. ನಾಗಭೂಷಣ | ರೂ. 40-00 |
| 11) | ಮುಕ್ತಚಂದ | ಶಾಂತಿನಾಥ ದೇಸಾಯಿ ನೆನಪಿನ ಸಂಪುಟ | ರೂ. 85-00 |
| 12) | ಕಂಬಾರರ ನಾಟಕಗಳು | ಸಂ. ವಿಕ್ರಮ ವಿಸಾಜಿ | ರೂ. 45-00 |
| 13) | ಅವಧೂತನೊಬ್ಬನ ರೂಪಾಂತರ | ಕಥಾ ಸಂಕಲನ | ರೂ. 30-00 |
| 14) | ಮರೆತ ಮಾತು (ಕವಿತೆಗಳು) | ಡಿ.ಎಸ್. ರಾಮಸ್ವಾಮಿ | ರೂ. 45-00 |
| 15) | ಎರಡು ಏಕಾಂಕಗಳು (ನಾಟಕಗಳು) | ಚಿ. ಶ್ರೀನಿವಾಸರಾಜು | ರೂ. 20-00 |
| 16) | ಹೊಸ್ತಿಲು ಹಿಮಾಲಯದ ಮಧ್ಯೆ (ಕವಿತೆಗಳು) | ವಾಸುದೇವ ನಾಡಿಗ್ | ರೂ. 40-00* |
| 17) | ಏಕೂಪೆ ಫೆಬ್ರವರಿ | ಸಂ.: ಸುಗತ | ರೂ. 30-00 |
| 18) | ಅಗಣಿತ ಚಹರೆ (ಕವಿತೆಗಳು) | ಸಂದೀಪ ನಾಯಕ | ರೂ. 30-00 |
| 19) | ಬೆಳಕಿನಾಟ (ವಿಮರ್ಶೆ) | ಡಾ. ಜಿ.ಬಿ. ಹರೀಶ | ರೂ. 60-00 |
| 20) | ನಾಳೆಯಿಂದ (ಕವಿತೆಗಳು) | ಡಿ.ವಿ. ಪ್ರಹ್ಲಾದ್ | ರೂ. 30-00 |




















*ಪ್ರತಿಗಳು ಮುಗಿದಿವೆ.

